KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೩, ೨೦೧೧, (ಮಾಘ ೧೪, ಶಕ ವರ್ಷ ೧೯೩೨) | ಸಂಚಿಕೆ ೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ಅಧಿಕೃತ ಜ್ಞಾಪನ

**ಸಂಖ್ಯೆ : ಸಿಆಸುಇ 149 ಸೇನಿನಿ 2010 ಬೆಂಗಳೂರು, ದಿನಾಂಕ : 18–10–2010**

**ವಿಷಯ :** ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇರ ನೇಮಕಾತಿ ಮಾಡುವಾಗ ಅಭ್ಯರ್ಥಿಗಳ ನಡತೆ ಮತ್ತು ಪೂರ್ವಚರಿತ್ರೆಯನ್ನು ಪರಿಶೀಲಿಸುವ ಬಗ್ಗೆ ಮತ್ತು ಪರೀಕ್ಷಾರ್ಥ ಅವಧಿಯನ್ನು ಪೂರೈಸಿದ ಬಗ್ಗೆ ಸಕಾಲದಲ್ಲಿ ಆದೇಶವನ್ನು ಹೊರಡಿಸುವ ಬಗ್ಗೆ.

**ಉಲ್ಲೇಖ :**
1. ದಿನಾಂಕ : 29–10–1959ರ ಅಧಿಕೃತ ಜ್ಞಾಪನ ಸಂಖ್ಯೆ : ಜಿಎಡಿ (ಎಸ್ 1)77 ಎಸ್‌ಆರ್‌ಆರ್ 59.
2. ದಿನಾಂಕ 10–11–1967ರ ಅಧಿಕೃತ ಜ್ಞಾಪನ ಸಂಖ್ಯೆ : ಜಿಎಡಿ 112 ಎಸ್‌ಆರ್‌ಆರ್ 67.
3. ದಿನಾಂಕ 14–04–1978ರ ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 35 ಎಸ್‌ಆರ್‌ಆರ್ 77.
4. ದಿನಾಂಕ 27–11–2002ರ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 60 ಸೇನಿನಿ 2002.

ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 10ರನ್ವಯ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇರ ನೇಮಕಾತಿ ಮಾಡುವಾಗ ಅಭ್ಯರ್ಥಿಯ ನಡತೆ ಹಾಗೂ ಪೂರ್ವಚರಿತ್ರೆ ಬಗ್ಗೆ ಹಾಗೂ ಮೇಲ್ಕಂಡ ನಿಯಮಗಳ ನಿಯಮ 12ರನ್ವಯ ಅಭ್ಯರ್ಥಿಯ ದೇಹದಾರ್ಢ್ಯತೆ ಬಗ್ಗೆ ಪರಿಶೀಲಿಸಿ, ಆಯ್ಕೆಯಾದ ಅಭ್ಯರ್ಥಿಯು ನೇರ ನೇಮಕಾತಿ ಹೊಂದಲು ಎಲ್ಲಾ ರೀತಿಯಲ್ಲೂ ಸೂಕ್ತವಾಗಿದ್ದಾನೆ ಎಂದು ನೇಮಕಾತಿ ಪ್ರಾಧಿಕಾರಕ್ಕೆ ಮನವರಿಕೆಯಾಗದ ಹೊರತು, ಅಂತಹ ಅಭ್ಯರ್ಥಿಯನ್ನು ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇಮಕ ಮಾಡುವಂತಿಲ್ಲ.

2. ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಅನಪೇಕ್ಷಿತ ಅಭ್ಯರ್ಥಿಗಳು ನೇಮಕವಾಗುವುದನ್ನು ತಪ್ಪಿಸುವ ಉದ್ದೇಶದಿಂದ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇಮಕಾತಿ ಮಾಡುವಾಗ ಅಭ್ಯರ್ಥಿಗಳ ನಡತೆ ಹಾಗೂ ಪೂರ್ವಚರಿತ್ರೆ (Character and Antecedents)ಯನ್ನು ಪರಿಶೀಲಿಸುವ ಬಗ್ಗೆ ದಿನಾಂಕ : 29–10–1959, 10–11–1997 ಮತ್ತು ದಿನಾಂಕ : 27–11–2002ರ ಉಲ್ಲೇಖದ ಅಧಿಕೃತ ಜ್ಞಾಪನಗಳಲ್ಲಿ ವಿವರವಾಗಿ ಮಾರ್ಗಸೂಚನೆಗಳನ್ನು ನೀಡಲಾಗಿರುತ್ತದೆ.

3. ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ನಡತೆ, ಪೂರ್ವಚರಿತ್ರೆ (Character and Antecedents)ಯನ್ನು ಪರಿಶೀಲಿಸದೆ ಹಾಗೂ ಅವರ ದೇಹದಾರ್ಢ್ಯತೆ ಬಗ್ಗೆ ವೈದ್ಯಕೀಯ ಪರೀಕ್ಷೆಯನ್ನು ನಡೆಸದೇ, ಅವುಗಳನ್ನು ಬಾಕಿ ಇಟ್ಟು ಕೆಲವು ನೇಮಕಾತಿ ಪ್ರಾಧಿಕಾರಗಳು ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ನೇಮಕಾತಿ ಪ್ರಾಧಿಕಾರಗಳು ಮಾಡುವ ಈ ಲೋಪದಿಂದ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಅನಪೇಕ್ಷಿತ ಅಭ್ಯರ್ಥಿಗಳು ನೇಮಕಗೊಳ್ಳುವ ಸಾಧ್ಯತೆ ಇರುವುದರಿಂದ ಇಂತಹ ಲೋಪಕ್ಕೆ ಅವಕಾಶ ಮಾಡಬಾರದೆಂದು ಮಾನ್ಯ ಸರ್ವೋಚ್ಚ ನ್ಯಾಯಾಲಯವು ಸಿವಿಲ್ ಅಪೀಲು ಸಂಖ್ಯೆ : 596/2007 – Khazia Mohammed Muzammil Vs the State of Karnataka and Another ಪ್ರಕರಣದಲ್ಲಿ ದಿನಾಂಕ 08–07–2010ರಂದು ನೀಡಿರುವ ತೀರ್ಪಿನಲ್ಲಿ ಒತ್ತಿ ಹೇಳಿದೆ.

4. ಮೇಲ್ಕಂಡ ತೀರ್ಪಿನಲ್ಲಿ ನೇರನೇಮಕಾತಿ ವಿಧಾನದಿಂದ ನೇಮಕಗೊಂಡ ನೌಕರರ ಪರೀಕ್ಷಾರ್ಥ ಅವಧಿಯು ಮುಕ್ತಾಯವಾದ ನಂತರ ವಿಳಂಬವಿಲ್ಲದೆ ಅವರು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ ಬಗ್ಗೆ ಆದೇಶ ಹೊರಡಿಸಬೇಕೆಂದು ಸೂಚಿಸಲಾಗಿದೆ. ಒಂದು ವೇಳೆ ಪರೀಕ್ಷಾರ್ಥ ಅವಧಿಯಲ್ಲಿರುವ ನೌಕರರು ನೇಮಕಗೊಂಡ ಹುದ್ದೆಗೆ ಸೂಕ್ತರಲ್ಲದಿದ್ದಲ್ಲಿ ಅಥವಾ ಅವರು ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ, 1977ರ ನಿಯಮ 5 ಮತ್ತು 6ರ ಉಪಬಂಧಗಳಿಗೊಳಪಟ್ಟು ಅವರನ್ನು ಸೇವೆಯಿಂದ ವಿಮುಕ್ತಿಗೊಳಿಸಲು ಕ್ರಮ ಕೈಗೊಳ್ಳಬೇಕು. ಪರೀಕ್ಷಾರ್ಥ ಅವಧಿಯಲ್ಲಿ ನೌಕರರ ಕಾರ್ಯನಿರ್ವಹಣೆಯ ಮೌಲ್ಯಮಾಪನಕ್ಕೆ ಅವರ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳು ಮುಖ್ಯವಾದ ಆಧಾರವಾಗುವುದರಿಂದ ಸಂಬಂಧಿತ ಪ್ರಾಧಿಕಾರಗಳು ಈ ವರದಿಗಳನ್ನು ನಿಗದಿತ ಕಾಲಾವಧಿಯಲ್ಲಿ

ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು 2000ದನ್ವಯ ಬರೆಯುವ ಅಗತ್ಯವನ್ನು ಸಹ ಸರ್ವೋಚ್ಛ ನ್ಯಾಯಾಲಯದ ಮೇಲ್ಕಂಡ ತೀರ್ಪಿನಲ್ಲಿ ಒತ್ತಿ ಹೇಳಲಾಗಿದೆ.

5. ರಾಜ್ಯ ಸಿವಿಲ್ ಸೇವೆಗೆ ನೇರನೇಮಕಾತಿ ವಿಧಾನದಲ್ಲಿ ನೇಮಕಗೊಂಡ ಅಭ್ಯರ್ಥಿಗಳನ್ನು ನೇಮಕ ಮಾಡುವಾಗ ಮತ್ತು ಅವರು ಪರೀಕ್ಷಾರ್ಥ ಅವಧಿಯಲ್ಲಿರುವಾಗ ಮತ್ತು ಆ ಅವಧಿಯು ಮುಕ್ತಾಯವಾದ ನಂತರ ಮೇಲ್ಕಂಡಂತೆ ಅಗತ್ಯ ಕ್ರಮ ಕೈಗೊಳ್ಳುವಂತೆ ಸಂಬಂಧಿತರೆಲ್ಲರಿಗೆ ಈ ಮೂಲಕ ಸೂಚಿಸಲಾಗಿದೆ.

**ಎಸ್.ವಿ. ರಂಗನಾಥ್**

ಪಿ.ಆರ್. 2872 ಸರ್ಕಾರದ ಮುಖ್ಯ ಕಾರ್ಯದರ್ಶಿ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಸಿಆಸುಇ 104 ರಾರಾಆ 2010, ಬೆಂಗಳೂರು, ದಿನಾಂಕ : 29–10–2010**

**ವಿಷಯ :** ರಾಷ್ಟ್ರ ಲಾಂಛನವನ್ನು ಧ್ಯೇಯವಾಕ್ಯ **"ಸತ್ಯಮೇವ ಜಯತೆ"** ಯೊಂದಿಗೆ ಸಂಪೂರ್ಣವಾಗಿ ಪ್ರದರ್ಶಿಸುವ ಕುರಿತು.

**ಉಲ್ಲೇಖ :** 1. ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 89 ರಾರಾಅ 2009, ದಿನಾಂಕ : 10–02–2010.

**2.** ಭಾರತ ಸರ್ಕಾರದ ಕೇಂದ್ರ ಗೃಹ ಮಂತ್ರಾಲಯದ ಪತ್ರ ಸಂಖ್ಯೆ : 13/1/2009 – ದಿನಾಂಕ : 08–09–2010.

ಭಾರತ ರಾಷ್ಟ್ರ ಲಾಂಛನವನ್ನು ಧ್ಯೇಯ ವಾಕ್ಯ **"ಸತ್ಯಮೇವ ಜಯತೆ"** ಯೊಂದಿಗೆ ಸಂಪೂರ್ಣವಾಗಿ ಪ್ರದರ್ಶಿಸುವ ಕುರಿತು ಉಲ್ಲೇಖಿತ (1)ರಲ್ಲಿ ನಮೂದಿಸಿರುವ ದಿನಾಂಕ : 10–02–2010ರ ಸುತ್ತೋಲೆಯನ್ನು ಹೊರಡಿಸಲಾಗಿತ್ತು. ಈ ಮಧ್ಯೆ ಉಲ್ಲೇಖಿತ (2)ರ ಭಾರತ ಸರ್ಕಾರದ ಕೇಂದ್ರ ಗೃಹ ಮಂತ್ರಾಲಯದ ದಿನಾಂಕ : 08–09–2010ರ ಪತ್ರದಲ್ಲಿ, ಭಾರತದ ರಾಷ್ಟ್ರ ಲಾಂಛನವನ್ನು ಬಳಸಲು ಅಧಿಕಾರ ಹೊಂದಿರುವ ಸರ್ಕಾರಿ ಏಜೆನ್ಸಿಗಳು, ನಮೂನೆಯಲ್ಲಿ ಲಗತ್ತಿಸಿರುವ ಪ್ರಕಾರ ಸಿಂಹ ಮುಕುಟದ ಪಾರ್ಶ್ವ ಚಿತ್ರದ ಕೆಳಗೆ ಬರೆದ ದೇವನಾಗರಿ ಭಾಷೆಯಲ್ಲಿ **"ಸತ್ಯಮೇವ ಜಯತೆ"** ಧ್ಯೇಯ ವಾಕ್ಯವಿರುವ ರಾಷ್ಟ್ರ ಲಾಂಛನದ ಪೂರ್ಣ ಚಿತ್ರ ಬಳಸದಿರುವುದು ಗಮನಕ್ಕೆ ಬಂದಿದೆ. ಆದಕಾರಣ, ಈ ಬಗ್ಗೆ ಮತ್ತೊಮ್ಮೆ ಸೂಕ್ತ ಸೂಚನೆಗಳನ್ನು ಸಂಬಂಧಪಟ್ಟ ಏಜೆನ್ಸಿಗಳಿಗೆ ನೀಡಬೇಕು ಎಂದು ತಿಳಿಸಿದೆ.

2. ಭಾರತದ ರಾಷ್ಟ್ರ ಲಾಂಛನದ ಅಪೂರ್ಣ ಪ್ರದರ್ಶನವು, ಭಾರತದ ರಾಷ್ಟ್ರ ಲಾಂಛನ (ಅನುಚಿತ ಬಳಕೆಯ ನಿಷೇಧ) ಅಧಿನಿಯಮ, 2005 ಮತ್ತು ಭಾರತದ ರಾಷ್ಟ್ರ ಲಾಂಛನ (ಬಳಕೆಯ ನಿಯಂತ್ರಣ) ನಿಯಮಗಳು, 2007ರ ಉಲ್ಲಂಘನೆಯಾಗುತ್ತದೆ.

3. ವಿವಿಧ ಸರ್ಕಾರಿ ಉದ್ದೇಶಗಳಿಗಾಗಿ ಭಾರತದ ರಾಷ್ಟ್ರ ಲಾಂಛನವನ್ನು ಬಳಸಲು ಅಧಿಕಾರ ಹೊಂದಿರುವ ಸರ್ಕಾರಿ ಏಜೆನ್ಸಿಗಳು, ನಮೂನೆಯಲ್ಲಿ ಲಗತ್ತಿಸಿರುವ ಪ್ರಕಾರ ಸಿಂಹಮುಕುಟದ ಪಾರ್ಶ್ವ ಚಿತ್ರದ ಕೆಳಗೆ ದೇವನಾಗರಿ ಭಾಷೆಯಲ್ಲಿ ಬರೆದ **"ಸತ್ಯಮೇವ ಜಯತೆ"** ಧ್ಯೇಯವಾಕ್ಯವಿರುವ ರಾಷ್ಟ್ರ ಲಾಂಛನದ ಪೂರ್ಣ ಚಿತ್ರವನ್ನು ಬಳಸಬೇಕು ಎಂಬುದನ್ನು ಪುನರುಚ್ಛರಿಸಲಾಗಿದೆ. ಈ ಸಂಬಂಧದಲ್ಲಿ ದಯವಿಟ್ಟು ಅಗತ್ಯ ಸೂಚನೆಗಳನ್ನು ತಮ್ಮ ಆಡಳಿತಾತ್ಮಕ ವ್ಯಾಪ್ತಿಯಲ್ಲಿ ಬರುವ ಇಲಾಖಾ ಮುಖ್ಯಸ್ಥರು/ಸರ್ಕಾರಿ ಸಂಸ್ಥೆಗಳಿಗೆ ನೀಡಿ **"ಸತ್ಯಮೇವ ಜಯತೆ"** ಧ್ಯೇಯವಾಕ್ಯವನ್ನು ರಾಷ್ಟ್ರ ಲಾಂಛನದಿಂದ ಹೊರತುಪಡಿಸದಂತೆ ನೋಡಿಕೊಳ್ಳಬೇಕೆಂದು ಕೋರಿದೆ.

**ವಿ. ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ರಾಜಕೀಯ)

## APPENDIX – I




Note : This design is in simplified form and meant for reproduction in small sizes, such as for use in stationery, seals and die-printing.

**APPENDIX – II**




Note : This design is more detailed and meant for reproduction in bigger sizes.

**T.K. VISWANATHAN,**
ಪಿ. ಆರ್. 2775 Secy, to the Govt. of India

## HEALTH AND FAMILY WELFARE SECRETARIAT

Sub: Contract for Externa Evaluation of Citizen Help Desk-reg.

**Preamble:**

As per the Project Implementation Plan, external evaluation of Citizen Help Desk (CHD) is one of the innovative schemes which will empower the public with information and provide guidance of health in Governsment Hospitals. It aims to enhance the efficiency of the staff by counselling, confidence building and redressing their grievances.

The scope of the services are as follows :

- To improve services at the Government hospitals by education of staff and public about facilities and services available ; monitoring the quality of Health care, Ex: time taken by doctor to attend a patient, availability of free drugs tec., timely feed back to the concerned authorities regarding health care delivery in Government hospitals.
- To enhance transparency and accoruntability in the delivery of services through the Help Desks which will give regular feedback and other support.
- To empower the public with information from Help Desk and provide guidance through posters, leaflets and boards tec.
- Enhance the efficiency of the service provision by staff by a strategy of counsellling, confidence building and motivation.
- Establish link between service providers and users through regular feedback mechanism.
- Conduct of regular interaction camps in the areas inhabited by poor to build confidence amongst the poor to access services at Public Hospitals.

It was decided to have a third party evaluation and the consent of World Bank was also obtained. An expression of Interest was published as per regulations, 13 proposals were received and M/s MA FOI CONSULTING SOLUTIONS LIMITED, Bangalore, has been selected as the eligible institution for the purpose.

Hence the following Order.

**Govt. Order No : KHSDRP/PPP/CHD/05/2010-11, Bangalore, Dated : 02-11-2010**

Under the circumstances as stated in the preamble, approval is accorded to contract M/s MA FOI consulting Solutions Limited, Bangalore to carry out the External Evaluation of Citizen Help Desk for 18 Hospitals in 18 districts, for a total negotiated cost of Rs. 8,97,000/- (Rupees eight lakhs ninety seven thousand only) for a period of three months.

The consultancy firm shall enter into an agreement with the Project accordingly, The ToRs shall form part of the Agreement.

By Order and in the name of the Governor of Karnataka

**K.N. RAMESH**
P.R. No. 2776 Deputy Secretary to Government, (I/c)
KHSDRP
Health and Family Welfare Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2010–11ನೇ ಶೈಕ್ಷಣಿಕ ಸಾಲಿಗೆ 01 ಅನುದಾನರಹಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಸ್ನಾತಕೋತ್ತರ ಕೋರ್ಸ್‌ಗಳ ಪ್ರವೇಶಕ್ಕೆ ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್ಸ್‌ಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆಕುಕ 107 ಪಿಟಿಡಿ 2010, ದಿನಾಂಕ : 23–09–2010.
2. ಸರ್ಕಾರದ ಆದೇಶ ಸಂಖ್ಯೆ : ಆಕುಕ 107 ಪಿಟಿಡಿ 2010, ದಿನಾಂಕ : 27–09–2010.
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 107 ಪಿಟಿಡಿ 2010, ದಿನಾಂಕ : 15–10–2010.
4. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಆಯುಷ್/80/ಅಭಿವೃದ್ಧಿ(1)/2009–10, ದಿನಾಂಕ : 25–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1) ರಲ್ಲಿನ ಸರ್ಕಾರದ ಆದೇಶದಲ್ಲಿ, 2010–11ನೇ ಸಾಲಿನಲ್ಲಿ ರಾಜ್ಯದ 03 ಸರ್ಕಾರಿ / 03 ಅನುದಾನಿತ ಹಾಗೂ 05 ಅನುದಾನರಹಿತ (ಒಟ್ಟು 11) ಆಯುರ್ವೇದ ಮಹಾವಿದ್ಯಾನಿಲಯಗಳಲ್ಲಿ ಸ್ನಾತಕೋತ್ತರ ಕೋರ್ಸುಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ಸೀಟ್ ಮ್ಯಾಟ್ರಿಕ್ಸ್‌ನ್ನು ನಿಗದಿಪಡಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿನ ಸರ್ಕಾರದ ಆದೇಶದಲ್ಲಿ, 2010–11ನೇ ಸಾಲಿನಲ್ಲಿ ರಾಜ್ಯದಲ್ಲಿನ 01 ಅನುದಾನಿತ–ಬಿ.ಎಂ.ಕೆ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಳಗಾಂ ಮತ್ತು 01 ಅನುದಾನರಹಿತ–ಎಸ್.ಡಿ.ಎಂ. ಅಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಹಾಸನ ಈ ಮಹಾವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಕೋರ್ಸುಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್ಸ್‌ಗಳನ್ನು ನಿಗದಿಪಡಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (3) ರಲ್ಲಿನ ಸರ್ಕಾರದ ಆದೇಶದಲ್ಲಿ, 2010–11ನೇ ಸಾಲಿನಲ್ಲಿ ಅನುದಾನರಹಿತ ಕೆ.ವಿ.ಜಿ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಸುಳ್ಯ, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿ ಲಭ್ಯವಿರುವ ಸ್ನಾತಕೋತ್ತರ ತಜ್ಞತೆಗಳಿಗೆ ಸರ್ಕಾರಿ ಕೋಟಾದಡಿ ಸೀಟು ಹಂಚಿಕೆ ಮಾಡಿ, ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್ಸ್‌ಗಳನ್ನು ನಿಗದಿಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (4) ರಲ್ಲಿನ ಆಯುಷ್ ನಿರ್ದೇಶಕರ ಪ್ರಸ್ತಾವನೆಯಲ್ಲಿ, ಕೇಂದ್ರ ಸರ್ಕಾರವು 01 ಅನುದಾನರಹಿತ ಶ್ರೀ ಎನ್. ಕೆ. ಜಬಶೆಟ್ಟಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೀದರ್ ಇಲ್ಲಿಗೆ ಪ್ರಸಕ್ತ ಸಾಲಿಗೆ ಮಾನ್ಯತೆ ನೀಡಿದ್ದು, ಈ ಮಹಾವಿದ್ಯಾಲಯದಲ್ಲಿ ಲಭ್ಯವಿರುವ ಸ್ನಾತಕೋತ್ತರ ತಜ್ಞತೆಗಳಿಗೆ ಸರ್ಕಾರಿ ಕೋಟಾದಡಿ ಸೀಟು ಹಂಚಿಕೆ ಮಾಡಿ, ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್ಸ್‌ಗಳನ್ನು ಅನುಬಂಧ–I & –II ರಲ್ಲಿಯೂ ನಿಗದಿಗೊಳಿಸಿ ಆದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 107 ಪಿಟಿಡಿ 2010, ಬೆಂಗಳೂರು, ದಿನಾಂಕ : 26ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2010–11 ನೇ ಸಾಲಿನಲ್ಲಿ 01 ಅನುದಾನರಹಿತ ಶ್ರೀ ಎನ್. ಕೆ. ಜಬಶೆಟ್ಟಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೀದರ್ ಇಲ್ಲಿ ಲಭ್ಯವಿರುವ ಸ್ನಾತಕೋತ್ತರ ತಜ್ಞತೆಗಳಿಗೆ ಸರ್ಕಾರಿ ಕೋಟಾದಡಿ ಸೀಟು ಹಂಚಿಕೆ ಮಾಡಿ, ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್ಸ್‌ಗಳನ್ನು ಈ ಕೆಳಕಂಡ ಅನುಬಂಧಗಳಲ್ಲಿ ವಿವರಿಸಿದಂತೆ ನಿಗದಿಗೊಳಿಸಿ ಆದೇಶಿಸಿದೆ.

ಅನುಬಂಧ– I – ಲಭ್ಯವಿರುವ ಸೀಟುಗಳ ವಿವರ
ಅನುಬಂಧ– II – ರೋಸ್ಟರ್ ಬಿಂದುಗಳ ವರ್ಗೀಕರಣ

\

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

### ANNEXURE-I

Statement Showing the post graduate seats in Un-Aided Private Ayurvedic Medical Colleges for the academic Year 2010-11

| Sl. No. | SUBJECT | NKJ AMC BIDAR | | |
|---|---|---|---|---|
| 1 | 2 | 3 | | |
| | | TS | MS | GS |
| 1 | Dravyaguna | 0 | 0 | 0 |
| 2 | Panchakarma | 3 | 2 | 1 |
| 3 | Shalyatantra | 5 | 4 | 1 |
| 4 | Kayachikitsa | 0 | 0 | 0 |
| 5 | Shalakyatantra | 0 | 0 | 0 |
| 6 | Rasashastra | 0 | 0 | 0 |

| | | | | |
|---|---|---|---|---|
| 7 | Ayurvedasiddhanta | 0 | 0 | 0 |
| 8 | Rachana Shareera | 5 | 4 | 1 |
| 9 | Roga Nidhana | 0 | 0 | 0 |
| 10 | Bhaishajya Kalpana | 0 | 0 | 0 |
| 11 | Prasooti Tantra | 5 | 4 | 1 |
| 12 | Swastha Vritha | 0 | 0 | 0 |
| 13 | Samhitha | 0 | 0 | 0 |
| 14 | Kaumara Bhritya | 0 | 0 | 0 |
| 15 | Basic Prinoiples | 0 | 0 | 0 |
| 16 | Manasa Roga | 0 | 0 | 0 |
| | Total | 18 | 14 | 4 |
| | Note : Ts : Total Seats/ MS: Management Seats/ GS: Government Seats | | | |

**R.S. ITAGI**
Under Secretary to Government
Health & Family Welfare Department, IMD

## ANNEXURE-II

Statement showing the details of seats available for candidates who are born in Karnataka & obtained degree In Karnataka & classification of roaster points as per Govt. Order No. DPAR/8/SAHI/MA/95, dated : 20-06-95 During the academic year 2010-11 in respect of Post Graduate Course in AYURVEDA

| Sl. No. | Subjects | Seats available for candidate who are born & obtained degree in Karnataka | Last roaster point of 2009-10 | Roaster Point of 2010-11 | Name of the colleges & No. of seats available | Remarks |
|---|---|---|---|---|---|---|
| 01 | 02 | 03 | 04 | 05 | 06 | 07 |
| 1 | PANCHAKARMA | ONE SEAT | - | 50-GM | NKJ AMC, BIDAR 01 | |
| | | | | | TOTAL SEATS 01 | |
| 2 | SHALYA TANTRA | ONE SEAT | - | 36-GM | NKJ AMC, BIDAR 01 | |
| | | | | | TOTAL SEATS 01 | |
| 3 | RACHANA SHAREERA | ONE SEAT | - | 17 – III(A) | NKJ AMC, BIDAR 01 | |
| | | | | | TOTAL SEATS 01 | |
| 4 | PRASOOTI TANTRA & STREEROGA | ONE SEAT | - | 14-GM | NKJ AMC, BIDAR 01 | |
| | | | | | TOTAL SEATS 01 | |

**R.S. ITAGI**
Under Secretary to Government
Health & Family Welfare Department
IMD

ಪಿ. ಆರ್. 2777

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಡಿ.ಬಿ. ಕಾಂತರಾಜು, ರೇಷ್ಮೆ ಪ್ರದರ್ಶಕರು ಇವರ ಅನಧಿಕೃತ ಗೈರುಹಾಜರಿಯನ್ನು ಕರ್ತವ್ಯವಲ್ಲದ ಅವಧಿ (Dies non) ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ : ಸಿಬ್ಬಂದಿ-1(8)/ಪಪೂಅ/118/04-05, ದಿನಾಂಕ : 18-2-2009, 30-12-2009 ಮತ್ತು 30-4-2010.
2. ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ-3(ಬಿ)/ಶಿಸ್ತು/3/99-2000, ದಿನಾಂಕ : 2-1-2001.
3. ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ-1(8)/ಪಪೂಅ/118/04-05, ದಿನಾಂಕ : 7-1-2005.

**ಪ್ರಸ್ತಾವನೆ :**

ಶ್ರೀ ಡಿ.ಬಿ. ಕಾಂತರಾಜು, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಕಬ್ಬಳ್ಳಿ ಇವರು ದಿನಾಂಕ : 26-2/1979 ರಂದು ಕಾರ್ಯವರದಿ ಮಾಡಿಕೊಂಡಿದ್ದು, ತಮ್ಮ ಸೇವೆಯ ಪರೀಕ್ಷಾರ್ಥ ಅವಧಿಯಲ್ಲಿಯೇ ದಿನಾಂಕ : 4-7-1983 ರಿಂದ 1-9-1993ರ ನಡುವಿನ ಅವಧಿಯಲ್ಲಿ ಒಟ್ಟು 2868 ದಿನಗಳು ಈ ಕೆಳಕಂಡಂತೆ ಕಛೇರಿಯ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ.

| | | |
|---|---|---|
| 01. | ದಿ : 4-7-1983 ರಿಂದ 19-7-1983 | 16 ದಿನಗಳು |
| 02. | ದಿ : 5-8-1983 ರಿಂದ 11-12-1983 | 129 ದಿನಗಳು |
| 03. | ದಿ : 12-12-83 ರಿಂದ 26-12-1983 | 15 ದಿನಗಳು |
| 04. | ದಿ : 26-1-1984 ರಿಂದ 9-2-1984 | 15 ದಿನಗಳು |
| 05. | ದಿ. 10-2-1984 ರಿಂದ 4-5-1984 | 85 ದಿನಗಳು |
| 06. | ದಿ : 5-5-1984 ರಿಂದ 15-6-1984 | 42 ದಿನಗಳು |
| 07. | ದಿ : 29-8-1984 ರಿಂದ 21-7-1989 | 1788 ದಿನಗಳು |
| 08. | ದಿ : 23-6-1991 ರಿಂದ 11-8-1991 | 50 ದಿನಗಳು |
| 09. | ದಿ : 15-8-1991 ರಿಂದ 5-1-1992 | 144 ದಿನಗಳು |
| 10. | ದಿ : 1-3-1992 ರಿಂದ 5-10-1993 | 584 ದಿನಗಳು |

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೌಕರರ ಹಿತದೃಷ್ಟಿಯಿಂದ ಅವರ ಪರಿವೀಕ್ಷಣ ಅವಧಿಯನ್ನು 26-2-1982 ರಿಂದ 30-7-1997 ರವರೆಗೆ ವಿಸ್ತರಿಸಿ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅಧಿಕೃತ ಜ್ಞಾಪನದಲ್ಲಿ ಮೇಲಿನ ಗೈರು ಹಾಜರಿಗಳಿಗೆಲ್ಲ ಅನಾರೋಗ್ಯವು ಕಾರಣವೆಂದು ತೀರ್ಮಾನಿಸಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅಧಿಕೃತ ಜ್ಞಾಪನದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸದರಿಯವರಿಗೆ ವಿವಿಧ ರಜೆಗಳನ್ನು ಮಂಜೂರು ಮಾಡಿರುತ್ತಾರೆ.

ಪ್ರಸ್ತುತ ಪ್ರಕರಣದಲ್ಲಿ ಶ್ರೀ ಡಿ.ಬಿ. ಕಾಂತರಾಜು, ರೇಷ್ಮೆ ಪ್ರದರ್ಶಕರು ಇವರು ಪರಿವೀಕ್ಷಣಾ ಅವಧಿಯಲ್ಲಿದ್ದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 114(8) ರನ್ವಯ ತಾತ್ಕಾಲಿಕ ನೌಕರರಾಗಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 117(ಬಿ) ರನ್ವಯ ವಿಶೇಷ ಸನ್ನಿವೇಶಗಳ ದೃಷ್ಟಿಯಿಂದ ಸರ್ಕಾರವು ಅನ್ಯಥಾ ನಿರ್ಧರಿಸುವ ಹೊರತು ಖಾಯಂ ಉದ್ಯೋಗ ಅಥವಾ ಅರೆ ಖಾಯಂ ಉದ್ಯೋಗದಲ್ಲಿರುವ ಯಾವುದೇ ಸರ್ಕಾರಿ ನೌಕರನಿಗೆ ಮಂಜೂರು ಮಾಡಬಹುದಾದ ಅಸಾಧಾರಣ ರಜೆಯ ಪರಿಮಿತಿಯನ್ನು ನಿಗದಿಪಡಿಸಲಾಗಿದೆ, ಆದರೆ, ಪ್ರಸ್ತುತ ಪ್ರಕರಣದಲ್ಲಿ ನೌಕರರಿಗೆ ಒಟ್ಟು 2868 ದಿನಗಳ ರಜೆಯನ್ನು 10 ಅವಧಿಗೆ ಮಂಜೂರು ಮಾಡಿದ್ದು ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಅವಧಿಯನ್ನು ಮೀರಿ ಇಲಾಖಾ ಮುಖ್ಯಸ್ಥರು ರಜೆಯನ್ನು ಮಂಜೂರು ಮಾಡಿರುತ್ತಾರೆ. ನಿಯಮಗಳನ್ನು ಸಡಿಲಿಸಿ ರಜೆ ಮಂಜೂರು ಮಾಡುವ ಅಧಿಕಾರ ಸರ್ಕಾರಕ್ಕೆ ಮಾತ್ರ ಇರುವ ಹಿನ್ನಲೆಯಲ್ಲಿ ಶ್ರೀ ಡಿ.ಬಿ. ಕಾಂತರಾಜು, ರೇಷ್ಮೆ ಪ್ರದರ್ಶಕರು ಇವರ ಪ್ರಕರಣದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಈಗಾಗಲೇ ನಿಯಮ ಬಾಹಿರವಾಗಿ ನೌಕರರ ಅನಧಿಕೃತ ಗೈರು ಹಾಜರಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ಆದೇಶಿಸಿರುವುದು ನಿಯಮಾನುಸಾರವಾಗಿರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಮುಂದುವರೆದ ತಾತ್ಕಾಲಿಕ ನೌಕರರ ಈ ಪ್ರಕರಣದಲ್ಲಿ ಇಲಾಖಾ ಮುಖ್ಯಸ್ಥರು ಮಂಜೂರು ಮಾಡಿರುವ ರಜೆಯು ನಿಯಮಾನುಸಾರವಿರುವುದಿಲ್ಲ ಮತ್ತು ರಜೆ ಮಂಜೂರು ಮಾಡಲು ಅವರು ಸಕ್ಷಮ ಪ್ರಾಧಿಕಾರವಾಗಿರುವುದಿಲ್ಲವಾದ್ದರಿಂದ ಸದರಿ ರಜಾ ಮಂಜೂರು ಮಾಡಿರುವ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ನೌಕರರಿಗೆ ಅನಾರೋಗ್ಯದ ಕಾರಣದಿಂದ ವೈದ್ಯಕೀಯ ಪ್ರಮಾಣ ಪತ್ರದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಅಧಿಕೃತ ಜ್ಞಾಪನದಲ್ಲಿ ರೇಷ್ಮೆ ಆಯುಕ್ತರು ಮಂಜೂರು ಮಾಡಿರುವ ಕ್ರಮಸಂಖ್ಯೆ 1 ರಿಂದ 6 ರವರೆಗೆ ವಿವಿಧ ರಜೆಗಳು ನಿಯಮಾನುಸಾರವಿರುವುದರಿಂದ ಅವುಗಳನ್ನು ಒಪ್ಪಿ ಉಳಿದಂತೆ ಕ್ರಮ ಸಂಖ್ಯೆ 7 ರಿಂದ 10 ರವರೆಗಿನ ಅವಧಿಗೆ ಮಂಜೂರು ಮಾಡಿರುವ ರಜೆಯು ನಿಯಮಾನುಸಾರವಿಲ್ಲದಿರುವುದರಿಂದ ನಿಯಮ ಬಾಹಿರವಾಗಿ ಮಂಜೂರು ಮಾಡಿರುವ ಈ ವಿವಿಧ ರಜೆಗಳ ಆದೇಶವನ್ನು ಹಿಂದಕ್ಕೆ ಪಡೆದು ಅವುಗಳನ್ನು ಕರ್ತವ್ಯವಲ್ಲದ ಅವಧಿಯೆಂದು ಪರಿಗಣಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 92 ರೇಇವಿ 2009, ಬೆಂಗಳೂರು, ದಿನಾಂಕ : 20-11-2010**

ಶ್ರೀ ಡಿ.ವಿ. ಕಾಂತರಾಜು, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಕಬ್ಬಳ್ಳಿ ಇವರಿಗೆ ರೇಷ್ಮೆ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಈಗಾಗಲೇ ಮಂಜೂರು ಮಾಡಿರುವ ವಿವಿಧ ರಜೆ/ವೇತನ ರಹಿತ ರಜೆಗಳ ಕುರಿತಂತೆ ಹೊರಡಿಸಿರುವ ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ 1(8)/ಪಪೂಅ/118/04-05, ದಿನಾಂಕ : 7-1-2005 ಇದು ಪೂರ್ತಿಯಾಗಿ ಕ್ರಮಬದ್ಧವಾಗಿಲ್ಲದಿರುವುದರಿಂದ ಕ್ರಮ ಸಂಖ್ಯೆ 1 ರಿಂದ 6ರ ವರೆಗಿನ

ಅವಧಿಗೆ ಮಂಜೂರು ಮಾಡಿರುವ ರಜೆಯನ್ನು ಹೊರತುಪಡಿಸಿ ಈ ಕೆಳಗಿನ ಅವಧಿಗೆ ಕ್ರಮ ಸಂಖ್ಯೆ 7 ರಿಂದ 10 ರಲ್ಲಿ ರಜೆ ಮಂಜೂರು ಮಾಡಿರುವುದನ್ನು ಹಿಂದಕ್ಕೆ ಪಡೆಯಲಾಗಿದೆ.

| | | |
|---|---|---|
| 01. | ದಿ : 29–8–1984 ರಿಂದ 21–7–1989 | 1788 ದಿನಗಳು |
| 02. | ದಿ : 23–6–1991 ರಿಂದ 11–8–1991 | 50 ದಿನಗಳು |
| 03. | ದಿ : 15–8–1991 ರಿಂದ 5–1–1992 | 144 ದಿನಗಳು |
| 04. | ದಿ : 1–3–1992 ರಿಂದ 5–10–1993 | 584 ದಿನಗಳು |

ಹಾಗೂ ನೌಕರರ ಮೇಲಿನ ಅನಧಿಕೃತ ಗೈರು ಹಾಜರಿಯ ಅವಧಿಯನ್ನು ಕರ್ತವ್ಯವಲ್ಲದ ಅವಧಿ (DIES NON) ಎಂದು ಪರಿಗಣಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/990/ವೆಚ್ಚ–1/2009, ದಿನಾಂಕ : 10–7–2009 ಹಾಗೂ ಟಿಪ್ಪಣಿ ಸಂಖ್ಯೆ : ಆಇ/1328/ವೆಚ್ಚ–1/2010, ದಿನಾಂಕ : 20–9–2010 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 2879

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಹುಮ್ನಾಬಾದ್‌ನಲ್ಲಿ ಸರ್ಕಾರಿ ರೇಷ್ಮೆ ನೂಲುಬಿಚ್ಚುವ ಕಿರುಘಟಕದ ಕಟ್ಟಡ ಹಾಗೂ ಖಾಲಿ ನಿವೇಶನವನ್ನು ಜಿ.ಟಿ.ಟಿ.ಸಿ. ಸಂಸ್ಥೆಗೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಪತ್ರ ಸಂಖ್ಯೆ : ವಾಕೈ 25 ರೇಯೋವಿ/2007, ದಿನಾಂಕ : 25–7–2007.

2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ : ರೇನಿ/ಗೂಮ/ಹುಬಾ/ಜಿಟಿಟಿಸಿ/14/07–08, ದಿನಾಂಕ : 13–11–2009 ಹಾಗೂ 25–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಬೀದರ್ ಜಿಲ್ಲೆಯ ಹುಮ್ನಾಬಾದ್ ನಲ್ಲಿರುವ ರೇಷ್ಮೆ ಇಲಾಖೆಯ ರೇಷ್ಮೆ ನೂಲು ಬಿಚ್ಚುವ ಕಿರುಘಟಕದ ಖಾಲಿ ಶೆಡ್ಡುಗಳನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಬಾಡಿಗೆ ಆಧಾರದ ಮೇಲೆ ನೀಡಲು ಸರ್ಕಾರದ ಅನುಮೋದನೆ ನೀಡಲಾಗಿದೆ. ಅದರಂತೆ ಇಲಾಖೆಯು ಶೆಡ್‌ಗಳನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಸಂಸ್ಥೆಗೆ ವಹಿಸಿಕೊಟ್ಟಿರುತ್ತದೆ. ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಸಂಸ್ಥೆ ಇವರು ಸರ್ಕಾರಿ ರೇಷ್ಮೆ ನೂಲು ಬಿಚ್ಚುವ ಕಿರುಘಟಕದ ಜಾಗ ಮತ್ತು ಕಟ್ಟಡವನ್ನು ರೇಷ್ಮೆ ಇಲಾಖೆಯು ನಿಗದಿಪಡಿಸುವ ದರವನ್ನು ನೀಡುವ ಷರತ್ತಿನ ಮೇಲೆ ನೀಡುವಂತೆ ಕೋರಿರುವುದಾಗಿ ತಿಳಿಸಿ ಅದರಂತೆ ಹುಮ್ನಾಬಾದ್‌ನಲ್ಲಿರುವ ಸರ್ಕಾರಿ ರೇಷ್ಮೆ ನೂಲು ಬಿಚ್ಚುವ ಕಿರುಘಟಕದ ಪ್ರಾಂಗಣದಲ್ಲಿ ಇರುವ ಕಟ್ಟಡಗಳು ಹಾಗೂ ಖಾಲಿ ಜಮೀನನ್ನು ರೇಷ್ಮೆ ಇಲಾಖೆಯು ನಿಗದಿಪಡಿಸಬಹುದಾದ ದರವನ್ನು ಪಾವತಿಸುವ ಷರತ್ತಿನ ಮೇರೆಗೆ ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ವರ್ಗಾಯಿಸುವ ಬಗ್ಗೆ ಸೂಕ್ತ ಆದೇಶ ನೀಡುವಂತೆ ಕೋರಿರುತ್ತಾರೆ.

ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಸಂಸ್ಥೆಯು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಸ್ವಾಮ್ಯದ ಸಂಸ್ಥೆಯಾಗಿದ್ದು, ಅದು ನಡೆಸುತ್ತಿರುವ ಡಿಪ್ಲೊಮೋ ಇನ್ ಟೂಲ್ ಅಂಡ್ ಡೈಮೇಕಿಂಗ್ ಕೋರ್ಸ್‌ನ್ನು ನಡೆಸಲು ಶೆಡ್‌ಗಳನ್ನು ನಿರ್ಮಿಸಿ ತರಬೇತಿ ನೀಡಬೇಕಾಗಿರುವುದರಿಂದ ಕಿರುಘಟಕದ ಪ್ರಾಂಗಣದಲ್ಲಿ ಇರುವ ಶೆಡ್ ಕಟ್ಟಡ ಹಾಗೂ ಖಾಲಿ ಜಾಗವನ್ನು ನೀಡುವಂತೆ ಕೋರಿರುವುದರಿಂದ ಹಾಗೂ ಸದರಿ ಜಮೀನು ಖಾಲಿ ಇರುವುದರಿಂದ ಅದನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಸಂಸ್ಥೆಗೆ ನೀಡುವ ವಿಷಯವನ್ನು ಪರಿಶೀಲಿಸಲಾಗಿದ್ದು, ಪ್ರಸ್ತಾವಿತ ಜಮೀನು ಹಾಗೂ ಕಟ್ಟಡಗಳನ್ನು ರೇಷ್ಮೆ ಇಲಾಖೆಯು ನಿಗದಿಪಡಿಸಬಹುದಾದ ದರವನ್ನು ಪಾವತಿಸುವ ಷರತ್ತಿನ ಮೇರೆಗೆ ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಹಸ್ತಾಂತರಿಸುವುದಕ್ಕೆ ಅನುಮತಿ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 31 ರೇಯೋವಿ 2009, ಬೆಂಗಳೂರು, ದಿನಾಂಕ : 19–11–2010**

ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರವು ಹುಮ್ನಾಬಾದ್‌ನಲ್ಲಿ ನಡೆಸುತ್ತಿರುವ ಡಿಪ್ಲೊಮೋ ಇನ್ ಟೂಲ್ ಅಂಡ್ ಡೈಮೇಕಿಂಗ್ ಕೋರ್ಸ್‌ನ್ನು ಸಮರ್ಪಕ ರೀತಿಯಲ್ಲಿ ನಡೆಸುವುದಕ್ಕಾಗಿ ಮತ್ತು ಶೆಡ್‌ಗಳನ್ನು ನಿರ್ಮಿಸಿ ತರಬೇತಿ ನೀಡಲು ಅನುಕೂಲವಾಗುವಂತೆ ರೇಷ್ಮೆ ಇಲಾಖೆಯು ಹುಮ್ನಾಬಾದ್‌ನಲ್ಲಿ ಹೊಂದಿರುವ ಸರ್ಕಾರಿ ರೇಷ್ಮೆ ನೂಲು ಬಿಚ್ಚುವ ಕಿರುಘಟಕದ ಪ್ರಾಂಗಣದಲ್ಲಿ ಇರುವ ಕಟ್ಟಡಗಳು ಹಾಗೂ ಖಾಲಿ ಜಮೀನನ್ನು ರೇಷ್ಮೆ ಇಲಾಖೆಯು ನಿಗದಿಪಡಿಸಬಹುದಾದ ದರವನ್ನು ಪಾವತಿಸುವ ಷರತ್ತಿನ ಮೇರೆಗೆ ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಹಸ್ತಾಂತರಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 2880

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಎಸ್‌ಜಿಎಸ್‌ವೈಗೆ ರಾಜ್ಯದ ಪಾಲಿನ 2009–10ನೇ ಸಾಲಿನ ಉಳಿಕೆ ಅನುದಾನ ಹಾಗೂ 2010–11ನೇ ಸಾಲಿನ ಒಂದನೇ ಕಂತಿನ ಉಳಿಕೆ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/1/2010/ಎಸ್‌ಜಿಎಸ್‌ವೈ–I (9) ದಿನಾಂಕ : 4–5–2010.
2. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/1/2010/ಎಸ್‌ಜಿಎಸ್‌ವೈ–I (38) ದಿನಾಂಕ : 18–6–2010.
3. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು, ದಿನಾಂಕ : 22–7–2010.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು ದಿನಾಂಕ : 4–8–2010.
5. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 56 ಬಿಆರ್‌ಎಸ್ 2010, ದಿನಾಂಕ : 29–9–2010.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯಡಿ 2009–10 ನೇ ಸಾಲಿಗೆ ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಒಟ್ಟಾರೆಯಾಗಿ ರೂ. 86,66,22,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ರೂ. 28,88,75,000 ಬಿಡುಗಡೆ ಮಾಡಬೇಕಿತ್ತು. ಯೋಜನೆಯ ಮಾರ್ಗಸೂಚಿಯಂತೆ ಅನುದಾನವನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75 : 25 ಅನುಪಾತದಲ್ಲಿ ಭರಿಸಬೇಕಾಗಿದೆ. ಆದರೆ 2009–10 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಕೆಲವೊಂದು ಜಿಲ್ಲಾ ಪಂಚಾಯತಿಗಳಿಗೆ ಒದಗಿಸಿರುವ ಅನುದಾನದಲ್ಲಿ ಕೊರತೆಯಿದ್ದುದರಿಂದ, ಆಯವ್ಯಯದ ಲಭ್ಯತೆಗೆ ಅನುಸಾರವಾಗಿ ಒಟ್ಟು ರೂ. 22,30,45,000 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿತ್ತು. 2009–10ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದ್ದ ರಾಜ್ಯದ ಪಾಲಿನ ಉಳಿಕೆ ಅನುದಾನ ರೂ. 6,58,27,000 ಗಳನ್ನು 2010–11 ನೇ ಸಾಲಿನಲ್ಲಿ ರಾಜ್ಯದ ಪಾಲಿನ ಅನುದಾನಕ್ಕೆ ರಾಜ್ಯದ ಆಯವ್ಯಯದಲ್ಲಿ ನಿಗದಿಪಡಿಸಿದ ಅನುದಾನ ರೂ. 24,05,12,000 ದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿತ್ತು ಆದರೆ ಬೆಂಗಳೂರು ಗ್ರಾಮಾಂತರ ಕೋಲಾರ ಮತ್ತು ರಾಮನಗರ ಜಿಲ್ಲಾ ಪಂಚಾಯತಿಗಳಿಗೆ 2010–11ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ನಿಗದಿ ಪಡಿಸಿದ ಅನುದಾನದಲ್ಲಿಯೂ ಕೊರತೆಯಿದ್ದುದರಿಂದ, ಜಿಲ್ಲಾ ಪಂಚಾಯತಿಗಳ ಅನುದಾನದ ಲಭ್ಯತೆ ಅನುಸಾರ ರೂ. 6,31,67,000 ಮಾತ್ರ ಓದಲಾಗಿದೆ (3)ರಲ್ಲಿ ಬಿಡುಗಡೆ ಮಾಡಲಾಗಿತ್ತು. ಇದಲ್ಲದೆ 2010–11 ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಓದಲಾಗಿದೆ (1) ಮತ್ತು (2) ರಲ್ಲಿ ಒಂದನೇ ಕಂತಿನ ಅನುದಾನ ರೂ. 47,41,09,000 ಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಮೊದಲನೇ ಕಂತಿನ ಅನುದಾನ ರೂ.15,80,36,000 ಬಿಡುಗಡೆ ಮಾಡಬೇಕಾಗಿತ್ತು. ಆದರೆ 2010–11 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಬೆಂಗಳೂರು ಗ್ರಾಮಾಂತರ, ಚಾಮರಾಜನಗರ, ಚಿಕ್ಕಮಗಳೂರು, ಚಿಕ್ಕಬಳ್ಳಾಪುರ, ಕೋಲಾರ, ರಾಯಚೂರು ಮತ್ತು ರಾಮನಗರ ಜಿಲ್ಲಾ ಪಂಚಾಯತಿಗಳಿಗೆ ನಿಗದಿ ಪಡಿಸಿದ ಅನುದಾನದ ಕೊರತೆಯಿದ್ದುದರಿಂದ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನಕ್ಕನುಗುಣವಾಗಿ ರೂ. 13,47,19,000 ಗಳನ್ನು ಮಾತ್ರ ಓದಲಾಗಿದೆ (4) ರಲ್ಲಿ ಬಿಡುಗಡೆಗೊಳಿಸಲಾಗಿತ್ತು.

2010–11ನೇ ಸಾಲಿಗೆ ಎಸ್‌ಜಿಎಸ್‌ವೈ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ರೂ. 10,00,00,000 ಹೆಚ್ಚುವರಿಯಾಗಿ ಹಂಚಿಕೆ ಮಾಡಿದೆ. ಆದುದರಿಂದ, 2009–10 ಹಾಗೂ 2010–11ನೇ ಸಾಲಿನ ರಾಜ್ಯದ ಪಾಲಿನ ಉಳಿಕೆ ಅನುದಾನ ಬಿಡುಗಡೆ ಮಾಡಬೇಕಾಗಿದೆ.

2009–10ನೇ ಸಾಲಿನ ಒಟ್ಟಾರೆ ಉಳಿಕೆ ಅನುದಾನ ರೂ. 26,60,000 ಅಂದರೆ, ಬೆಂಗಳೂರು ಗ್ರಾಮಾಂತರ ಪಂಚಾಯತಿಗೆ ರೂ. 2,77,000, ಕೋಲಾರ ಜಿಲ್ಲಾ ಪಂಚಾಯತಿಗೆ ರೂ. 4,52,000 ಮತ್ತು ರಾಮನಗರ ಜಿಲ್ಲಾ ಪಂಚಾಯತಿಗೆ ರೂ. 19,31,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ.

2010–11ನೇ ಸಾಲಿನ ಒಂದನೇ ಕಂತಿನ ಒಟ್ಟಾರೆ ಉಳಿಕೆ ಅನುದಾನ ರೂ. 2,33,19,000 ಅಂದರೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಗೆ ರೂ. 20,58,000, ಚಾಮರಾಜನಗರ ಜಿಲ್ಲಾ ಪಂಚಾಯತಿಗೆ ರೂ. 57,14,000, ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಗೆ ರೂ. 19,25,000, ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ರೂ. 26,20,000, ಕೋಲಾರ ಜಿಲ್ಲಾ ಪಂಚಾಯತಿಗೆ ರೂ. 45,91,000, ರಾಯಚೂರು ಜಿಲ್ಲಾ ಪಂಚಾಯತಿಗೆ ರೂ. 27,26,000 ಮತ್ತು ರಾಮನಗರ ಜಿಲ್ಲಾ ಪಂಚಾಯತಿಗೆ ರೂ. 36,85,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ.

ಮೂರು ಜಿಲ್ಲಾ ಪಂಚಾಯತಿಗಳಿಗೆ 2009–10ನೇ ಸಾಲಿನ ರಾಜ್ಯದ ಪಾಲಿನ ಒಟ್ಟು ಉಳಿಕೆ ಅನುದಾನ ರೂ. 26,60,000 ಗಳನ್ನು ಮತ್ತು ಏಳು ಜಿಲ್ಲಾ ಪಂಚಾಯತಿಗಳಿಗೆ 2010–11ನೇ ಸಾಲಿನ ರಾಜ್ಯದ ಪಾಲಿನ ಒಂದನೇ ಕಂತಿನ ಒಟ್ಟು ಉಳಿಕೆ ಅನುದಾನ ರೂ. 2,33,19,000, ಒಟ್ಟಾರೆಯಾಗಿ ರೂ. 2,59,79,000 ಗಳನ್ನು 2010–11 ರ ಆಯವ್ಯಯದಲ್ಲಿ ಭರಿಸಿ ಬಿಡುಗಡೆ ಮಾಡಬೇಕಾಗಿದೆ ಆದುದರಿಂದ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 15–11–2010

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಮೂರು ಜಿಲ್ಲಾ ಪಂಚಾಯತಿಗಳಿಗೆ 2009–10ನೇ ಸಾಲಿನ ರಾಜ್ಯದ ಪಾಲಿನ ಒಟ್ಟು ಉಳಿಕೆ ಅನುದಾನ ರೂ. 26,60,000ಗಳನ್ನು ಮತ್ತು ಏಳು ಜಿಲ್ಲಾ ಪಂಚಾಯತಿಗಳಿಗೆ 2010–11ನೇ ಸಾಲಿನ ರಾಜ್ಯದ ಪಾಲಿನ ಒಂದನೇ ಕಂತಿನ ಒಟ್ಟು ಉಳಿಕೆ ಅನುದಾನ ರೂ. 2,33,19,000, ಒಟ್ಟಾರೆಯಾಗಿ ರೂ. 2,59,79,000 ಗಳನ್ನು (ರೂ. ಎರಡು ಕೋಟಿ ಐವತ್ತೊಂಬತ್ತು ಲಕ್ಷದ ಎಪ್ಪತ್ತೊಂಬತ್ತು ಸಾವಿರ ಮಾತ್ರ) 2010–11 ರ ಆಯವ್ಯಯದಿಂದ ಭರಿಸಿ, ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು :**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೇಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–11 ನೇ (2501–01–198–6–01) " (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ : 14–7–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯಾ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್‌ಜೆವೈ 2007 ದಿನಾಂಕ 18–4–2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2010–11ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 223 ಪಿಬಿಎಸ್ 2010 ದಿನಾಂಕ : 9–11–2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ॥ ಎಂ.ಆರ್. ಏಕಾಂತಪ್ಪ**
ನಿರ್ದೇಶಕರು (ಸ್ವಉಕಾ) (ಪ್ರ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಅನುಬಂಧ

**ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 15–11–2010 (ರೂ. ಗಳಲ್ಲಿ)**

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2010–11 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿ ಪಡಿಸಿದ ಒಟ್ಟು ಅನುದಾನ (ಮೂಲ + ಹೆಚ್ಚುವರಿ) | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ 2009–10ನೇ ಸಾಲಿನ ಉಳಿಕೆ ಅನುದಾನ | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ 2010–11ನೇ ಸಾಲಿನ ಒಂದನೇ ಉಳಿಕೆ ಅನುದಾನ | ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುತ್ತಿರುವ ಒಟ್ಟು ಅನುದಾನ (7+8) |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಂಗಳೂರು (ಗ್ರಾ) | 402 | 0300ZZ8001 | 66,56,000 | 2,77,000 | 20,58,000 | 23,35,000 |
| 2 | ಚಾಮರಾಜನಗರ | 456 | 1000 ZZ0001 | 2,30,13,000 | 0 | 57,14,000 | 57,14,000 |
| 3 | ಚಿಕ್ಕಮಗಳೂರು | 408 | 1800 ZZ0017 | 1,19,00,000 | 0 | 19,25,000 | 19,25,000 |
| 4 | ಚಿಕ್ಕಬಳ್ಳಾಪುರ | 453 | 0600 ZZ0001 | 1,07,93,000 | 0 | 26,20,000 | 26,20,000 |
| 5 | ಕೋಲಾರ | 404 | 0700 ZZ8002 | 1,41,96,000 | 4,52,000 | 45,91,000 | 50,43,000 |
| 6 | ರಾಯಚೂರು | 420 | 3600 ZZ0001 | 2,06,67,000 | 0 | 27,26,000 | 27,26,000 |
| 7 | ರಾಮನಗರ | 452 | 0400 ZZ0001 | 1,15,64,000 | 19,31,000 | 36,85,000 | 56,16,000 |
| | ಒಟ್ಟು | | | 9,87,89,000 | 26,60,000 | 2,33,19,000 | 2,59,79,000 |

**ಡಾ॥ ಎಂ.ಆರ್. ಏಕಾಂತಪ್ಪ**
ನಿರ್ದೇಶಕರು (ಸ್ವಉಕಾ) (ಪ್ರ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ. ಆರ್. 2881

## ಜಲ ಸಂಪನ್ಮೂಲ ಸಚಿವಾಲಯ

ವಿಷಯ : ಶ್ರೀ ಈರಪ್ಪ ಲಕ್ಷ್ಮಣ ಬೆಳವಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಹುಕ್ಕೇರಿ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 28 ಸೇಇವಿ 2004, ದಿನಾಂಕ : 6–12–2006.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ : ವಿಜಾಪುರ : ಕಮತನೂರ ಸ.ನೀ.ಕೆರೆ : ಉಮುಇಂ : 2008–09 : 22/1, ದಿನಾಂಕ : 31–12–2008.

3. ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ : ಸನೀಇ 10 ಸೇಇವಿ 2009, ದಿನಾಂಕ : 11–6–2010.

4. i) ಶ್ರೀ ಈರಪ್ಪ ಲಕ್ಷ್ಮಣ ಬೆಳವಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರ ಸಮಜಾಯಿಷಿ ದಿನಾಂಕ : 9–8–2010.
   ii) ಶ್ರೀ ಡಿ.ಎಸ್. ಮದ್ಲಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರ ಸಮಜಾಯಿಷಿ ದಿನಾಂಕ : 5–8–2010.
   iii) ಶ್ರೀ ಎ.ಜಿ. ಮೇಟಿ, ಸಹಾಯಕ ಇಂಜಿನಿಯರ್, ಇವರ ಸಮಜಾಯಿಷಿ ದಿನಾಂಕ : 31–7–2010.
   iv) ಶ್ರೀ ವಿ.ವಿ. ದೇಶಪಾಂಡೆ, ಸಹಾಯಕ ಇಂಜಿನಿಯರ್, ಇವರ ಸಮಜಾಯಿಷಿ ದಿನಾಂಕ : 10–8–2010.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರ ಸಣ್ಣ ನೀರಾವರಿ ಯೋಜನೆಯ ಕೆರೆ ಏರಿ ನಿರ್ಮಾಣದಲ್ಲಿನ ಲೋಪದೋಷಗಳಿಗೆ ಕಾರಣರಾದ ಅಧಿಕಾರಿಗಳ ಕರ್ತವ್ಯ ಲೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಿ, ಆರೋಪಗಳು ಸಾಬೀತಾಗದ ಕಾರಣ ಸರ್ಕಾರದ ಆದೇಶ ಸಂಖ್ಯೆ : ಸನೀಇ 28 ಸೇಇವಿ 2004, ದಿನಾಂಕ : 6–12–2006ರ ಪ್ರಕಾರ ಕೆಳಕಂಡ ಅಧಿಕಾರಿಗಳನ್ನು ಆರೋಪಗಳಿಂದ ದೋಷ ಮುಕ್ತಗೊಳಿಸಲಾಗಿತ್ತು.

1. ಶ್ರೀ ವಿ.ಬಿ. ಕದಂ, ನಿವೃತ್ತ ಅಧೀಕ್ಷಕ ಇಂಜಿನಿಯರ್, (ಪ್ರಸ್ತುತ ನಿಧನ ಹೊಂದಿರುತ್ತಾರೆ)
2. ಶ್ರೀ ಸಯದ್ ದರ್‌ವೇಶಿ ಮೊಹಿಯುದ್ದೀನ್, ನಿವೃತ್ತ ಅಧೀಕ್ಷಕ ಇಂಜಿನಿಯರ್,
3. ಶ್ರೀ ಈರಪ್ಪ ಲಕ್ಷ್ಮಣ ಬೆಳವಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
4. ಶ್ರೀ ಡಿ.ಎಸ್. ಮದ್ಲಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
5. ಶ್ರೀ ಎಸ್.ಕೆ. ಹುಕ್ಕೇರಿ, ಸಹಾಯಕ ಇಂಜಿನಿಯರ್.
6. ಶ್ರೀ ವಿ.ವಿ. ದೇಶಪಾಂಡೆ, ಸಹಾಯಕ ಇಂಜಿನಿಯರ್.

ಮೇಲ್ಕಂಡ ಕೆರೆ ಕಾಮಗಾರಿ ನಿರ್ವಹಣೆಯಲ್ಲಿನ ಲೋಪದೋಷಗಳ ಬಗ್ಗೆ ವಿಶೇಷ ಜಾಗೃತಿ ದಳ, ಬೆಂಗಳೂರು, ಕೆ.ಇ.ಆರ್.ಎಸ್. ತಂಡ, ಕೆ.ಆರ್. ಸಾಗರ, ಮೈಸೂರು, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು, ಶ್ರೀ ಬಸವರಾಜಕೋಟಿ, ನಿರ್ದೇಶಕರು, (ಪ್ರಭಾರ), ಕೆ.ಇ.ಆರ್.ಎಸ್. ಕೆ.ಆರ್. ಸಾಗರ, ಮೈಸೂರು ಮತ್ತು ಶ್ರೀ ಜಿ.ಆರ್. ದೇಶಪಾಂಡೆ, ಅಧೀಕ್ಷಕ ಭೂ ವಿಜ್ಞಾನಿಗಳು, (ನಿವೃತ್ತ) ಧಾರವಾಡ, ಈ ತಂಡಗಳು ತನಿಖೆ ಜರುಗಿಸಿ, ಸಲ್ಲಿಸಿದ ವರದಿಗಳಲ್ಲಿ ಮೇಲ್ಕಂಡ ಕಾಮಗಾರಿಯಲ್ಲಿ ಕಳಪೆ ಮಟ್ಟದ ಸಾಮಗ್ರಿಗಳನ್ನು ಬಳಸಲಾಗಿದೆಯೆಂದು ಮತ್ತು ಸುಮಾರು ರೂ. 1185.43 ಲಕ್ಷಗಳನ್ನು ಖರ್ಚು ಮಾಡಿದ್ದರೂ, ಈ ಕೆರೆ ನಿರ್ಮಾಣದಿಂದ ಸಾರ್ವಜನಿಕರಿಗೆ ಯಾವುದೇ ಉಪಯೋಗವಾಗದಿರುವುದನ್ನು ಬೆಳಕಿಗೆ ತಂದಿರುವುದರಿಂದ ಈ ಎಲ್ಲಾ ತನಿಖಾ ವರದಿಗಳಲ್ಲಿ ಪ್ರಸ್ತಾಪಿಸಿರುವಂತೆ ಕಾಮಗಾರಿ ನಿರ್ವಹಣೆಯಲ್ಲಿ ಉಂಟಾಗಿರುವ ಲೋಪದೋಷಗಳಿಗೆ ಸಂಬಂಧಿಸಿದಂತೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ : 6–12–2006ರ ಆದೇಶದಲ್ಲಿ ದೋಷಮುಕ್ತಗೊಳಿಸಿದ ಅಧಿಕಾರಿಗಳ ಜೊತೆಗೆ ಇನ್ನೂ ಕೆಲವು ಅಧಿಕಾರಿಗಳು ಭಾಗಿಯಾಗಿರುವುದರಿಂದ ಈ ಕೆಳಕಂಡ ಎಲ್ಲಾ ಅಧಿಕಾರಿಗಳ ವಿರುದ್ಧ ಹೊಸದಾಗಿ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸುವಂತೆ ಮುಖ್ಯ ಇಂಜಿನಿಯರ್, ಉತ್ತರ ವಲಯ, ಬಿಜಾಪುರ, ಇವರು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ : 31–12–2008ರ ಪತ್ರದಲ್ಲಿ ಕೋರಿರುತ್ತಾರೆ.

1. ಶ್ರೀ ವಿ.ಬಿ. ಕದಂ, ನಿವೃತ್ತ ಅಧೀಕ್ಷಕ ಇಂಜಿನಿಯರ್, (ಪ್ರಸ್ತುತ ನಿಧನ ಹೊಂದಿರುತ್ತಾರೆ)
2. ಶ್ರೀ ಸಯದ್ ದರ್‌ವೇಶಿ ಮೊಹಿಯನುದ್ದೀನ್, ನಿವೃತ್ತ ಕಾರ್ಯಪಾಲಕ ಇಂಜಿನಿಯರ್,
3. ಶ್ರೀ ತಿರುಮೂರ್ತಿ, ನಿವೃತ್ತ ಸಹಾಯಕ ಕಾರ್ಯಪಾಲಕ ಇಂಜಿನಿಯರ್.
4. ಶ್ರೀ ಈರಪ್ಪ ಲಕ್ಷ್ಮಣ ಬೆಳವಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
5. ಶ್ರೀ ಐ.ಬಿ. ಪಾಟೀಲ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
6. ಶ್ರೀ ಡಿ.ಎಸ್. ಮದ್ಲಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
7. ಶ್ರೀ ಬಿ.ಸಿ. ಪಾಟೀಲ, ನಿವೃತ್ತ ಸಹಾಯಕ ಕಾರ್ಯಪಾಲಕ ಇಂಜಿನಿಯರ್.
8. ಶ್ರೀ ವಿ.ವಿ. ಮುಗದಮ್, ನಿವೃತ್ತ ಸಹಾಯಕ ಕಾರ್ಯಪಾಲಕ ಇಂಜಿನಿಯರ್.
9. ಶ್ರೀ ಎ.ಜಿ. ಮೇಟಿ, ಸಹಾಯಕ ಇಂಜಿನಿಯರ್.
10. ಶ್ರೀ ಎಸ್.ಕೆ. ಹುಕ್ಕೇರಿ, ಸಹಾಯಕ ಇಂಜಿನಿಯರ್.
11. ಶ್ರೀ ವಿ.ವಿ. ದೇಶಪಾಂಡೆ, ಸಹಾಯಕ ಇಂಜಿನಿಯರ್.

ಈ ಮೇಲ್ಕಂಡ ಅಧಿಕಾರಿಗಳ ಪೈಕಿ ನಿಧನರಾದ ಮತ್ತು ಸೇವೆಯಿಂದ ನಿವೃತ್ತಿ ಹೊಂದಿರುವವರನ್ನು ಹೊರತುಪಡಿಸಿ, ಕೆಳಕಂಡ ಅಧಿಕಾರಿಗಳು ಎಸಗಿರುವ ಕರ್ತವ್ಯ ಲೋಪಗಳ ಬಗ್ಗೆ ದೋಷಾರೋಪಣಾ ಪಟ್ಟಿಗಳನ್ನು ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ : 11–6–2010ರ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ಜಾರಿ ಮಾಡಲಾಗಿತ್ತು.

1. ಶ್ರೀ ಈರಪ್ಪ ಲಕ್ಷ್ಮಣ ಬೆಳವಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
2. ಶ್ರೀ ಐ.ಬಿ. ಪಾಟೀಲ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
3. ಶ್ರೀ ಡಿ.ಎಸ್. ಮದ್ಲಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
4. ಶ್ರೀ ಎ.ಜಿ. ಮೇಟಿ, ಸಹಾಯಕ ಇಂಜಿನಿಯರ್.
5. ಶ್ರೀ ಎಸ್.ಕೆ. ಹುಕ್ಕೇರಿ, ಸಹಾಯಕ ಇಂಜಿನಿಯರ್.
6. ಶ್ರೀ ವಿ.ವಿ. ದೇಶಪಾಂಡೆ, ಸಹಾಯಕ ಇಂಜಿನಿಯರ್.

ಮೇಲ್ಕಂಡ ಅಧಿಕಾರಿಗಳ ಪೈಕಿ ಕ್ರಮ ಸಂಖ್ಯೆ : 1,3,4 ಮತ್ತು 6 ರಲ್ಲಿನ ಅಧಿಕಾರಿಗಳು ಸಮಜಾಯಿಷಿಯನ್ನು ಸಲ್ಲಿಸಿದ್ದು, ಅವರುಗಳ ವಿರುದ್ಧ ಮಾಡಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ. ಕ್ರಮ ಸಂಖ್ಯೆ : 2 ಮತ್ತು 5 ರಲ್ಲಿನ ಅಧಿಕಾರಿಗಳು ಈ ದಿನಾಂಕದವರೆಗೆ ಸಮಜಾಯಿಷಿ ಸಲ್ಲಿಸಿರುವುದಿಲ್ಲ. ಕ್ರಮ ಸಂಖ್ಯೆ 1,3,4 ಮತ್ತು 6 ರಲ್ಲಿನ ಅಧಿಕಾರಿಗಳು ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕಗಳಲ್ಲಿ ಸಲ್ಲಿಸಿರುವ ಸಮಜಾಯಿಷಿಗಳನ್ನು ಪರಿಶೀಲಿಸಲಾಗಿ, ಅವು ಸಮಂಜಸವಾಗಿರುವುದಿಲ್ಲ. ಆದುದರಿಂದ ಅವರುಗಳ ವಿರುದ್ಧ ಮಾಡಿರುವ ಆರೋಪಗಳ ಸತ್ಯಾಸತ್ಯತೆಯನ್ನು ಕಂಡು ಹಿಡಿಯಲು ಮೇಲ್ಕಂಡ ಎಲ್ಲಾ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ನಿರ್ಧರಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ಸೇಇವಿ 2009, ಬೆಂಗಳೂರು, ದಿನಾಂಕ : 18ನೇ ನವೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆ ಏರಿ ನಿರ್ಮಾಣ ಕಾಮಗಾರಿಯಲ್ಲಿ ಕಳಪೆ ಮಟ್ಟದ ಸಾಮಗ್ರಿಗಳನ್ನು ಬಳಸಿ, ಆರ್ಥಿಕ ನಷ್ಟ ಉಂಟಾಗಲು ಕಾರಣರಾಗಿರುವ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಕೆ.ಎನ್. ನಾಗೇಂದ್ರ ಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ತಾಂತ್ರಿಕ ಸಹಾಯಕರು, ಅಧೀಕ್ಷಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವೃತ್ತ, ಬೆಳಗಾಂ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

1. ಶ್ರೀ ಈರಪ್ಪ ಲಕ್ಷ್ಮಣ ಬೆಳವಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
2. ಶ್ರೀ ಐ.ಬಿ. ಪಾಟೀಲ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
3. ಶ್ರೀ ಡಿ.ಎಸ್. ಮದ್ಲಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್.
4. ಶ್ರೀ ಎ.ಜಿ. ಮೇಟಿ, ಸಹಾಯಕ ಇಂಜಿನಿಯರ್.
5. ಶ್ರೀ ಎಸ್.ಕೆ. ಹುಕ್ಕೇರಿ, ಸಹಾಯಕ ಇಂಜಿನಿಯರ್.
6. ಶ್ರೀ ವಿ.ವಿ. ದೇಶಪಾಂಡೆ, ಸಹಾಯಕ ಇಂಜಿನಿಯರ್.

ವಿಚಾರಣಾಧಿಕಾರಿಗಳು, ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11ರ ಪ್ರಕಾರ ಜರುಗಿಸಿ, ವಿಚಾರಣಾ ವರದಿಯನ್ನು ನಾಲ್ಕು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವುದು.

ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 22 ಸೇಇವಿ 2007, ದಿನಾಂಕ : 11–4–2008 ರನ್ವಯ ನಿಗದಿಪಡಿಸಿರುವಂತೆ ರೂ. 8,000/– ಸಂಚಿತ ಸಂಭಾವನೆ ಹಾಗೂ ರೂ. 1500/–ಗಳ ವಾಹನ ಭತ್ಯೆಯನ್ನು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪಾವತಿಸುವುದು.

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ವಿಚಾರಣಾಧಿಕಾರಿಯವರಿಗೆ ವಿಚಾರಣೆ ಜರುಗಿಸಲು ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ, ಲೇಖನ ಸಾಮಗ್ರಿ ಇತ್ಯಾದಿ ಸೌಲಭ್ಯಗಳನ್ನು ಒದಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 2882 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಂದಾಯ ಸಚಿವಾಲಯ

**ವಿಷಯ :** ನೆಫ್ರೋ ಯೂರಾಲಜಿ ಸಂಸ್ಥೆ, ವಿಕ್ಟೋರಿಯಾ ಆಸ್ಪತ್ರೆ ಇವರು ಕಣ್‌ತಪ್ಪಿನಿಂದ ಕರ್ನಾಟಕ ಪ್ರಕೃತಿ ವಿಕೋಪ ನಿಧಿಗೆ ಜಮಾ ಮಾಡಿರುವ ರೂ. 15,000 ಗಳನ್ನು ಮಾನ್ಯ ಮುಖ್ಯಮಂತ್ರಿಯವರ ಪರಿಹಾರ ನಿಧಿಗೆ ಜಮಾ ಮಾಡುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯಮಂತ್ರಿಯವರ ಉಪಕಾರ್ಯದರ್ಶಿಗಳ ಪತ್ರ ಸಂ : ಸಿಎಂ/24845/ಸಿಎಂಆರ್‌ಎಫ್/2010, ದಿನಾಂಕ : 30–4–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿಯವರ ಉಪ ಕಾರ್ಯದರ್ಶಿಗಳು ನೆಫ್ರೋ ಯೂರಾಲಜಿ ಸಂಸ್ಥೆ, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಇವರು ಮಾನ್ಯ ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ರೂ. 15,000/–ಗಳ ಚೆಕ್ಕನ್ನು ದೇಣಿಗೆಯಾಗಿ ನೀಡಿದ್ದರು. ಆದರೆ, ಕಣ್‌ತಪ್ಪಿನಿಂದಾಗಿ ಸದರಿ ಹಣವು ಮಾನ್ಯ ಮುಖ್ಯಮಂತ್ರಿಯವರ ಪರಿಹಾರ ನಿಧಿಗೆ ಜಮಾ ಆಗುವುದರ ಬದಲಾಗಿ ಕರ್ನಾಟಕ ಪ್ರಕೃತಿ ವಿಕೋಪ ಪರಿಹಾರ ನಿಧಿಗೆ ಜಮಾ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 15,000/–ಗಳ ಚೆಕ್ಕನ್ನು ಮಾನ್ಯ ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಜಮಾ ಮಾಡುವಂತೆ ಕೋರಿರುವ ಹಿನ್ನೆಲೆಯಲ್ಲಿ, ಕೆಳಕಂಡ ಆದೇಶ ಹೊರಡಿಸಲಾಗಿದೆ

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 235 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ : 15–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನೆಫ್ರೋ ಯೂರಾಲಜಿ ಸಂಸ್ಥೆ, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಇವರು ನೀಡಿದ್ದ ವಂತಿಕೆಯನ್ನು ಕಣ್ತಪ್ಪಿನಿಂದ ಕರ್ನಾಟಕ ಪ್ರಕೃತಿ ವಿಕೋಪ ಪರಿಹಾರ ನಿಧಿಗೆ ಜಮಾ ಮಾಡಿರುವ ಮೊತ್ತ ರೂ. 15,000/–ಗಳನ್ನು (ಹದಿನೈದು ಸಾವಿರ ರೂಪಾಯಿಗಳು ಮಾತ್ರ) ಖಜಾನೆಯಿಂದ ಡ್ರಾ ಮಾಡಿ, ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಜಮಾ ಮಾಡಲು ಮಂಜೂರಾತಿ ನೀಡಿದೆ.

ಮೇಲಿನಂತೆ ತಿಳಿಸಿರುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235–00–111–0–02 “ Public Contributions to the calamity Relief ” ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಮುಖ್ಯಮಂತ್ರಿಗಳ ಕಾರ್ಯದರ್ಶಿಯವರು ನೀಡಿರುವ ಒಪ್ಪಿಗೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2883 ಕಂದಾಯ ಇಲಾಖೆ (ವಿ.ನಿ ಮತ್ತು ಸೇವೆಗಳು–2)

## ಕಾನೂನು ನಾಯ್ಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : 2010–11ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ** :
1) ಸರಕಾರದ ಆದೇಶ ಸಂಖ್ಯೆ ಲಾ 32 ಎಲ್‌ಸಿಎಲ್ 1982 ದಿನಾಂಕ 17/18–03–1983 ಮತ್ತು ತಿದ್ದುಪಡಿ ದಿನಾಂಕ: 30–10–1996ರ ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಸಿಎಲ್ 1996.
2) ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ : ಲಾ 120 ಎಲ್‌ಸಿಎಲ್ 2007, ದಿನಾಂಕ 18–02–2008 ಮತ್ತು ಸೇರ್ಪಡೆ ದಿನಾಂಕ 16–05–2008.
3) ಅಧಿಸೂಚನೆ ಸಂಖ್ಯೆ: ಕಂಇ 59 ಭೂದಾಮ 2008 ದಿನಾಂಕ: 26–12–2009.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ದಿ ಕರ್ನಾಟಕ ಗ್ರಾಂಟ್–ಇನ್–ಏಡ್–ಟು–ಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 17/18–03–1983ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ ತಿದ್ದುಪಡಿ ತರಲಾಗಿದ್ದು, ದಿನಾಂಕ: 30–10–1996ರ ಅಧಿಸೂಚನೆಯಲ್ಲಿ ಆಯಾ ಜಿಲ್ಲೆಯ ಪ್ರಧಾನ/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 18–02–2008 ಮತ್ತು ಸೇರ್ಪಡೆ ದಿನಾಂಕ: 16–05–2008 ರನ್ವಯ ಸಹಾಯಾನುದಾನ ಮೊತ್ತವನ್ನು ಹೆಚ್ಚಿಸಿದ ಕರ್ನಾಟಕ ವಕೀಲರ ಸಂಘಗಳಿಗೆ ಸಹಾಯಾನುದಾನ (ತಿದ್ದುಪಡಿ) ನಿಯಮಗಳು, 2007 ದಿನಾಂಕ: 18–02–2008 ರಿಂದ ಜಾರಿಗೆ ಬಂದಿದೆ. ಅದರಂತೆ ಹಣ ಬಿಡುಗಡೆಗಾಗಿ ರಾಜ್ಯದಲ್ಲಿನ ವಿವಿಧ ವಕೀಲರ ಸಂಘಗಳು ಸಹಾಯಾನುದಾನ ಬಿಡುಗಡೆಗಾಗಿ ಒತ್ತಾಯಿಸಿವೆ.

ಮೇಲೆ (3)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 26–12–2009ರಲ್ಲಿ ಗುಲ್ಬರ್ಗಾ ಜಿಲ್ಲೆಯ ಸರಹದ್ದಿನಿಂದ ಯಾದಗಿರಿ, ಶೋರಾಪುರ ಷಹಾಪುರ ತಾಲ್ಲೂಕುಗಳೊಂದಿಗೆ ವಿಭಜನೆಗೊಂಡು ದಿನಾಂಕ: 30–12–2009 ರಿಂದ ಜಾರಿಗೆ ಬರುವಂತೆ ಹೊಸದಾಗಿ ಯಾದಗಿರಿ ಜಿಲ್ಲೆ ರಚನೆಯಾಗಿದ್ದು, ಅದರಂತೆ ಉಲ್ಲೇಖ (2)ರನ್ವಯ ಜಿಲ್ಲಾ ಮಟ್ಟಕ್ಕೆ ನಿಗದಿಪಡಿಸಲಾಗಿರುವ ಮೊತ್ತವನ್ನು ಯಾದಗಿರಿ ಜಿಲ್ಲೆಗೆ ಪರಿಗಣಿಸಿದೆ.

2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2014–00–114–0–01–059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ರೂ. 50.00 ಲಕ್ಷಗಳನ್ನು ಒದಗಿಸಿದೆ. ಅದರಲ್ಲಿ ರಾಜ್ಯದ ವಕೀಲರ ಸಂಘಗಳಿಗೆ ನಿಯಮಾನುಸಾರ ಸಹಾಯಾನುದಾನವನ್ನು ಅಡ್ವೋಕೇಟ್ ಜನರಲ್‌ರವರ ಮೂಲಕ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ತಿಳಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ಲಾ 137 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ: 04–11–2010

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ರಾಜ್ಯದಲ್ಲಿನ ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಗಳು 1983 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಒಟ್ಟು ರೂ. 41,70,000/– (ರೂಪಾಯಿ ನಲವತ್ತೊಂದು ಲಕ್ಷದ ಎಪ್ಪತ್ತು ಸಾವಿರ ಮಾತ್ರ) ಮೊತ್ತದ ಸಹಾಯಾನುದಾನಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಎಲ್ಲಾ ವಿಭಾಗೀಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ಸಂಬಂಧಪಟ್ಟಂತೆ ಸಕ್ಷಮ ಪ್ರಾಧಿಕಾರಗಳು ಅಂದರೆ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ವಕೀಲರ ಸಂಘಗಳಿಂದ ವರದಿಯೊಂದಿಗೆ ಅರ್ಜಿಗಳನ್ನು ಪಡೆದು ಪರಿಶೀಲಿಸಿ ಈ ಕೆಳಗೆ ನಿಗದಿ ಪಡಿಸಲಾಗಿರುವಂತೆ ಮಂಜೂರು ಮಾಡಬಹುದು ಮತ್ತು ಆರ್ಥಿಕ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳ ಅನ್ವಯ ನಿಗದಿತ ಕಾಲಮಿತಿಯೊಳಗೆ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

- ತಾಲ್ಲೂಕು ಮಟ್ಟದ ವಕೀಲರ ಸಂಘ – ರೂ. 20,000/–
- ಜಿಲ್ಲಾ ಮಟ್ಟದ ವಕೀಲರ ಸಂಘ – ರೂ. 35,000/–
- ವಿಭಾಗೀಯ ಮಟ್ಟದ ವಕೀಲರ ಸಂಘ – ರೂ. 50,000/–
- ಬೆಂಗಳೂರು ವಕೀಲರ ಸಂಘ – ರೂ. 1,25,000/–

ಹಿಂದಿನ ಸಾಲಿನಲ್ಲಿ ಸಹಾಯಾನುದಾನ ಪಡೆದಿದ್ದಾಗ್ಯೂ ಸಹಾಯಾನುದಾನ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣಪತ್ರ ಪಡೆದು, ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು. ಆರ್ಥಿಕ ವರ್ಷ ಮುಗಿದ ಕೂಡಲೆ ಈ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರಿಗಳು ಬಿಡುಗಡೆ ಮಾಡಿದ ಮತ್ತು ಅದ್ಯರ್ಪಣೆ ಮಾಡಿದ ವಿವರಗಳನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸುವುದು.

ಈ ಸಹಾಯಾನುದಾನವನ್ನು ಅಡ್ವೋಕೇಟ್ ಜನರಲ್‌ರವರ ಮೂಲಕ ಲೆಕ್ಕ ಶೀರ್ಷಿಕೆ 2014–00–114–0–01–059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 423 ವೆಚ್ಚ–10/2010 ದಿನಾಂಕ 12–10–2010ರಲ್ಲಿ ನೀಡಲಾಗಿರುವ ಸಹಮತಿಯನ್ವಯ ಹಾಗೂ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿರುವ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10–07–1996ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು ನ್ಯಾಯ ಮತ್ತು ಮಾನವ
ಹಕ್ಕುಗಳ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಲಾ 137 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ: 04–11–2010**

**ಅನುಬಂಧ**

ರಾಜ್ಯದಲ್ಲಿನ ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2010–11ನೇ ಸಾಲಿಗೆ ಬಿಡುಗಡೆ ಮಾಡಬೇಕಾದ ಅನುದಾನ ವಿವರಗಳು

| ಕ್ರಮ ಸಂಖ್ಯೆ | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆಗೊಳಿಸಬೇಕಾದ ಮೊತ್ತ |
|---|---|---|---|---|
| | | ಜಿಲ್ಲಾ ಮಟ್ಟದ ವಿಭಾಗ ವಕೀಲರ ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| 1. | ಬೆಂಗಳೂರು ನಗರ ವಕೀಲರ ಸಂಘ | – | 1 | 1,45,000–00 |
| 2. | ಬೆಂಗಳೂರು (ಗ್ರಾಮಾಂತರ) | – | 4 | 80,000–00 |
| 3. | ರಾಮನಗರ ಜಿಲ್ಲೆ | 1 | 3 | 95,000–00 |
| 4. | ಕೋಲಾರ | 1 | 6 | 1,55,000–00 |
| 5. | ಚಿಕ್ಕಬಳ್ಳಾಪುರ | 1 | 4 | 1,15,000–00 |
| 6 | ತುಮಕೂರು | 1 | 9 | 2,15,000–00 |
| 7. | ಮೈಸೂರು | 1 (ವಿ.ಮ.) | 6 | 1,70,000–00 |
| 8. | ಚಾಮರಾಜನಗರ | 1 | 3 | 95,000–00 |
| 9. | ಮಂಡ್ಯ | 1 | 6 | 1,55,000–00 |
| 10. | ಹಾಸನ | 1 | 7 | 1,75,000–00 |
| 11. | ಶಿವಮೊಗ್ಗ | 1 | 6 | 1,55,000–00 |
| 12 | ಚಿಕ್ಕಮಗಳೂರು | 1 | 6 | 1,55,000–00 |
| 13. | ಚಿತ್ರದುರ್ಗ | 1 | 5 | 1,35,000–00 |
| 14. | ದಾವಣಗೆರೆ | 1 | 5 | 1,35,000–00 |
| 15. | ಬಳ್ಳಾರಿ | 1 | 6 | 1,55,000–00 |
| 16. | ಬೆಳಗಾಂ | 1 (ವಿ.ಮ.) | 11 | 2,70,000–00 |
| 17. | ಬಿಜಾಪುರ | 1 | 4 | 1,15,000–00 |
| 18. | ಬಾಗಲಕೋಟೆ | 1 | 6 | 1,55,000–00 |
| 19. | ಧಾರವಾಡ | 1 | 3 | 95,000–00 |
| 20. | ಹಾವೇರಿ | 1 | 6 | 1,55,000–00 |
| 21. | ಗದಗ್ | 1 | 4 | 1,15,000–00 |
| 22. | ಉತ್ತರ ಕನ್ನಡ | 1 | 11 | 2,55,000–00 |
| 23. | ಬೀದರ್ | 1 | 4 | 1,15,000–00 |
| 24. | ಗುಲ್ಬರ್ಗಾ | 1 (ವಿ.ಮ.) | 7 | 1,90,000–00 |
| 25. | ಯಾದಗಿರಿ | 1 | 2 | 75,000–00 |
| 26. | ರಾಯಚೂರು | 1 | 4 | 1,15,000–00 |
| 27. | ಕೊಪ್ಪಳ | 1 | 3 | 95,000–00 |
| 28. | ದಕ್ಷಿಣಕನ್ನಡ | 1 | 5 | 1,35,000–00 |
| 29. | ಉಡುಪಿ | 1 | 2 | 75,000–00 |
| 30 | ಕೊಡಗು | 1 | 2 | 75,000–00 |
| | ಒಟ್ಟು | | | 41,70,000–00 |

**(ಶಕುಂತಲ ಹೆಚ್.ಆರ್)**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ

ಹಕ್ಕುಗಳ ಇಲಾಖೆ

ಪಿ.ಆರ್. 2861

## ಯೋಜನೆ , ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ರಾಜ್ಯದಲ್ಲಿ ಎರಡನೇ ಹಂತವಾಗಿ 43 ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸುವ ಕುರಿತಂತೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಪಿಡಿ 102 ಎಸ್ಎಂಸಿ 2006 ದಿನಾಂಕ 11-06-2007.

2) ಸರ್ಕಾರದ ಆದೇಶ ಸಂಖ್ಯೆ: ಪಿಡಿ 14 ಎಸ್ಎಂಸಿ 2010 ದಿನಾಂಕ 05-03-2010.

***

**ಪ್ರಸ್ತಾವನೆ :**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಸೆಕ್ಷನ್ 309 (2) ರಲ್ಲಿ ಪ್ರತಿ ತಾಲ್ಲೂಕಿಗೂ ಅಭಿವೃದ್ಧಿ ಯೋಜನೆಯನ್ನು ತಯಾರಿಸಲು ಹೇಳಲಾಗಿದೆ. ಡಾ. ಡಿ.ಎಂ. ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ಪ್ರಾದೇಶಿಕ ಅಸಮತೋಲನಾ ನಿವಾರಣಾ ಉನ್ನತಾಧಿಕಾರ ಸಮಿತಿಯು ಗುರುತಿಸಿರುವ ಒಟ್ಟು 114 ಅತೀ ಹಿಂದುಳಿದ, ಅತ್ಯಂತ ಹಿಂದುಳಿದ ಮತ್ತು ಹಿಂದುಳಿದ ತಾಲ್ಲೂಕುಗಳ ಪೈಕಿ, 64 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಾಗೂ ಸಚಿವ ಸಂಪುಟದ ಅನುಮೋದನೆಯೊಂದಿಗೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದ ಮುಖಾಂತರ ಈಗಾಗಲೇ ಪ್ರಾರಂಭಿಸಲಾಗಿದೆ. ಪ್ರಸ್ತುತ ಇವುಗಳು 39 ಅತೀ ಹಿಂದುಳಿದ 17 ಅತ್ಯಂತ ಹಿಂದುಳಿದ, 04 ಹಿಂದುಳಿದ ತಾಲ್ಲೂಕುಗಳಲ್ಲಿ ಮತ್ತು 04 ಇತರೇ ತಾಲ್ಲೂಕುಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಪ್ರತಿ ತಾಲ್ಲೂಕು ಯೋಜನಾ ಘಟಕವು ಸಮೂಹ 'ಬಿ' ವೃಂದದ ಒಬ್ಬ ತಾಲ್ಲೂಕು ಯೋಜನಾಧಿಕಾರಿಯನ್ನು ಹಾಗೂ ಸಮೂಹ 'ಸಿ' ವೃಂದದ ಒಬ್ಬ ಪ್ರಗತಿ ಸಹಾಯಕರನ್ನು ಒಳಗೊಂಡಿರುತ್ತದೆ. ಈ ತಾಲ್ಲೂಕು ಯೋಜನಾ ಘಟಕವು ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಯ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತದೆ.

2. ಮೇಲ್ಕಾಣಿಸಿದ ಪ್ರಸ್ತಾವನೆಗೆ ಸಹಮತಿಯನ್ನು ನೀಡುವ ಸಮಯದಲ್ಲಿ ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್‌ಡಿ 1197 ವೆಚ್ಚ-7 2006 ದಿನಾಂಕ 17-02-2007 ರಲ್ಲಿ ನೀಡಿರುವ ಅಭಿಪ್ರಾಯವು ಈ ರೀತಿ ಇರುತ್ತದೆ: "On review of functioning of these Taluk Planning Units a decision can be taken to replicate this in other taluks also." ಮುಂದುವರೆದು ಎಲ್ಲಾ ಜಿಲ್ಲಾ ಪಂಚಾಯತ್‌ಗಳು ತಮ್ಮ ತಮ್ಮ ಜಿಲ್ಲೆಗಳ ಎಲ್ಲಾ ತಾಲ್ಲೂಕುಗಳಲ್ಲೂ ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸುವಂತೆ ಕೋರಿಕೊಂಡಿರುತ್ತವೆ.

3. ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಕೆ. ಪ್ರತಾಂಪಚಂದ್ರ ಶೆಟ್ಟಿರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 124/2008 ಕ್ಕೆ ಸರ್ಕಾರವು ಉತ್ತರ ನೀಡುವಾಗ **"ಪ್ರಸ್ತುತ ಸೃಜಿಸಲಾದ 64 ತಾಲ್ಲೂಕು ಯೋಜನಾ ಘಟಕಗಳ ಕಾರ್ಯನಿರ್ವಹಣೆ ಮತ್ತು ಅವುಗಳ ಉಪಯುಕ್ತತೆ, ಇತ್ಯಾದಿಗಳನ್ನು ಪರಿಶೀಲಿಸಿದ ನಂತರ ಇನ್ನುಳಿದ ತಾಲ್ಲೂಕುಗಳಲ್ಲಿ ಯೋಜನಾ ಘಟಕಗಳನ್ನು ಸೃಜಿಸುವ ಪ್ರಸ್ತಾವನೆಯನ್ನು ಕೈಗೆತ್ತಿಕೊಳ್ಳಲಾಗುವುದೆಂದು"** ಹೇಳಿರುತ್ತದೆ. ಸರ್ಕಾರದ ಈ ಉತ್ತರವು ವಿಧಾನ ಪರಿಷತ್ತಿನ ಭರವಸೆ ಸಂಖ್ಯೆ: 2958/2008 ಎಂದು ಸರ್ಕಾರದ ಭರವಸೆಯಾಗಿ ಪರಿಣಮಿಸಿರುತ್ತದೆ.

4. ಮೇಲ್ಕಾಣಿಸಿದಂತೆ ಗುರುತಿಸಲಾದ 114 ತಾಲ್ಲೂಕುಗಳ ಪೈಕಿ ಉಳಿದಿರುವ ಎಲ್ಲಾ 23 ಅತ್ಯಂತ ಹಿಂದುಳಿದ ತಾಲ್ಲೂಕುಗಳಲ್ಲಿ ಮತ್ತು 20 ಹಿಂದುಳಿದ ತಾಲ್ಲೂಕುಗಳಲ್ಲಿ ಈ ರೀತಿಯಾಗಿ ಒಟ್ಟು 43 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಎರಡನೇ ಹಂತವಾಗಿ ಪ್ರಾರಂಭಿಸಲು ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯಲಾಗಿದೆ.

5. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿನ ಅಧಿಕಾರಯುತ ಸಮಿತಿಯು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ವಿವಿಧ ವೃಂದಗಳಲ್ಲಿ ದಿನಾಂಕ: 01.04.2000 ರಂದು ಖಾಲಿಯಿದ್ದ ಹುದ್ದೆಗಳ ಪೈಕಿ ಶೇಕಡ 80 ರಷ್ಟು ಹುದ್ದೆಗಳನ್ನು ಕಡಿತಗೊಳಿಸುವ ವಿಷಯವನ್ನು ಪರಿಶೀಲಿಸುವಾಗ ಕೆಲವು ಹುದ್ದೆಗಳನ್ನು ಉಳಿಸಿಕೊಳ್ಳುವ ಹಾಗೂ ರದ್ದುಪಡಿಸುವ ಕುರಿತು ನಿರ್ಣಯಗಳನ್ನು ಕೈಗೊಂಡ ಸಮಯದಲ್ಲಿ ಸದರಿ 43 ತಾಲ್ಲೂಕು ಯೋಜನಾ ಘಟಕಗಳಿಗೆ ತಾಲ್ಲೂಕು ಯೋಜನಾಧಿಕಾರಿಗಳನ್ನು ನೇಮಿಸುವ ಸಲುವಾಗಿ ಸಮೂಹ ಸಿ ವೃಂದದ 43 ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗಳನ್ನು ಉಳಿಸಿಕೊಂಡು ಅವುಗಳನ್ನು ಸಮೂಹ ಬಿ ವೃಂದದ ಸಹಾಯಕ ನಿರ್ದೇಶಕರ ಹುದ್ದೆಗಳಾಗಿ ಮೇಲ್ದರ್ಜೆಗೇರಿಸಿ ಸದರಿ ಹುದ್ದೆಗಳನ್ನು ತಾಲ್ಲೂಕು ಯೋಜನಾ ಘಟಕಗಳಿಗೆ ವರ್ಗಾಯಿಸಲು ಶಿಫಾರಸ್ಸು ಮಾಡಿರುತ್ತದೆ. ಸದರಿ ಶಿಫಾರಸ್ಸಿನ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಮೂಹ ಸಿ ವೃಂದದ ವೇತನ ಶ್ರೇಣಿ ರೂ. 10000-18150 ರ 43 ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗಳನ್ನು ಸದರಿ ನಿರ್ದೇಶನಾಲಯದ ವೃಂದ ಬಲದಲ್ಲಿಯೇ ಗುರುತಿಸಿ ಅವುಗಳನ್ನು ಸಮೂಹ ಬಿ ವೃಂದದ ವೇತನ ಶ್ರೇಣಿ ರೂ. 11400-21600 ರ ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿ ಆದೇಶಿಸಲಾಗಿದೆ.

6. ಎರಡನೇ ಹಂತವಾಗಿ 43 ತಾಲ್ಲೂಕು ಯೋಜನಾ ಘಟಕಗಳನ್ನು ಅಂದರೆ ಕೆಳಕಂಡಂತೆ 23 ತಾಲ್ಲೂಕು ಯೋಜನಾ ಘಟಕಗಳನ್ನು ಉಳಿದಿರುವ ಎಲ್ಲಾ ಅತ್ಯಂತ ಹಿಂದುಳಿದ ತಾಲ್ಲೂಕುಗಳಲ್ಲಿ ಮತ್ತು 20 ತಾಲ್ಲೂಕು ಯೋಜನಾ ಘಟಕಗಳನ್ನು ಹಿಂದುಳಿದ ತಾಲ್ಲೂಕುಗಳಲ್ಲಿ ಅಂದರೆ ಈ ರೀತಿಯಾಗಿ ಒಟ್ಟು 43 ತಾಲ್ಲೂಕು ಯೋಜನಾ ಘಟಕಗಳನ್ನು ಪ್ರಾರಂಭಿಸಲು ಹಾಗೂ ಸದರಿ ತಾಲ್ಲೂಕು ಯೋಜನಾ ಘಟಕಗಳಿಗೆ ತಾಲ್ಲೂಕು ಯೋಜನಾಧಿಕಾರಿಗಳನ್ನು ನೇಮಿಸುವ ಸಲುವಾಗಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ 43 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ರಾಜ್ಯ ವಲಯದಿಂದ ಜಿಲ್ಲಾ ವಲಯಕ್ಕೆ ವರ್ಗಾಯಿಸಲು ಸಚಿವ ಸಂಪುಟದ ಅನುಮೋದನೆಯನ್ನು ಪಡೆಯಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ಅತ್ಯಂತ ಹಿಂದುಳಿದ ತಾಲ್ಲೂಕುಗಳು | ಹಿಂದುಳಿದ ತಾಲ್ಲೂಕುಗಳು |
|---|---|---|---|
| 1 | ಬಳ್ಳಾರಿ | 1) ಸಿರಗುಪ್ಪ<br>2) ಹಗರಿಬೊಮ್ಮನಹಳ್ಳಿ<br>3) ಹೂವಿನಹಡಗಲಿ | |
| 2 | ಕೊಪ್ಪಳ | 4) ಕೊಪ್ಪಳ | 1) ಗಂಗಾವತಿ |
| 3 | ರಾಯಚೂರು | 5) ರಾಯಚೂರು | |
| 4 | ಬಾಗಲಕೋಟೆ | 6) ಬಾದಾಮಿ | |
| 5 | ಬೆಳಗಾಂ | 7) ಸವದತ್ತಿ | 2) ರಾಯಬಾಗ |

| | | | |
|---|---|---|---|
| | | | 3) ಬೈಲಹೊಂಗಲ<br>4) ರಾಮದುರ್ಗ<br>5) ಹುಕ್ಕೇರಿ |
| 6 | ಬಿಜಾಪುರ | | 6) ಬಿಜಾಪುರ |
| 7 | ಧಾರವಾಡ | | 7) ನವಲಗುಂದ<br>8) ಕುಂದಗೋಳ |
| 8 | ಗದಗ | | 9) ಶಿರಹಟ್ಟಿ |
| 9 | ಹಾವೇರಿ | 8) ಶಿಗ್ಗಾಂವ್ | 10) ಹಾವೇರಿ<br>11) ಬ್ಯಾಡಗಿ<br>12) ಹಾನಗಲ್ |
| 10 | ಉತ್ತರ ಕನ್ನಡ | | 13) ಅಂಕೋಲ<br>14) ಸಿದ್ದಾಪುರ |
| 11 | ಬೆಂಗಳೂರು (ನಗರ) | | 15) ಆನೇಕಲ್ |
| 12 | ಬೆಂಗಳೂರು (ಗ್ರಾ) | | 16) ಹೊಸಕೋಟೆ |
| 13 | ಚಿತ್ರದುರ್ಗ | 9) ಹಿರಿಯೂರು<br>10) ಹೊಳಲಕೆರೆ<br>11) ಚಳ್ಳಕೆರೆ | |
| 14 | ದಾವಣಗೆರೆ | 12) ಹೊನ್ನಾಳಿ<br>13) ಜಗಳೂರು | |
| 15 | ಕೋಲಾರ | 14) ಗುಡಿಬಂಡೆ<br>15) ಗೌರಿಬಿದನೂರು | 17) ಶ್ರೀನಿವಾಸಪುರ<br>18) ಮಾಲೂರು |
| 16 | ಶಿವಮೊಗ್ಗ | 16) ಸೊರಬ | |
| 17 | ತುಮಕೂರು | 17) ತುರುವೇಕೆರೆ<br>18) ಕೊರಟಗೆರೆ<br>19) ಚಿಕ್ಕನಾಯಕನಹಳ್ಳಿ | |
| 18 | ಚಾಮರಾಜನಗರ | 20) ಕೊಳ್ಳೇಗಾಲ | |
| 19 | ಹಾಸನ | | 19) ಹೊಳೆನರಸೀಪುರ |
| 20 | ಮಂಡ್ಯ | 21) ಕೃಷ್ಣರಾಜಪೇಟೆ | |
| 21 | ಮೈಸೂರು | 22) ಟಿ. ನರಸೀಪುರ<br>23) ನಂಜನಗೂಡು | |
| 22 | ಗುಲ್ಬರ್ಗಾ | | 20) ಗುಲ್ಬರ್ಗಾ |
| | ಒಟ್ಟು | 23 | + 20 = 43 |

**ಸರ್ಕಾರಿ ಆದೇಶ ಸಂಖ್ಯೆ: ಪಿಡಿ 15 ಎಸ್‌ಎಂಸಿ 2010, ಬೆಂಗಳೂರು, ದಿನಾಂಕ: 22–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ರಾಜ್ಯದಲ್ಲಿ ಎರಡನೇ ಹಂತವಾಗಿ 43 ತಾಲ್ಲೂಕು ಯೋಜನಾ ಘಟಕಗಳನ್ನು ಕೆಳಕಂಡ ತಾಲ್ಲೂಕು ಪಂಚಾಯತ್‌ಗಳಲ್ಲಿ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಿ ಆದೇಶಿಸಲಾಗಿದೆ.

2. ಮುಂದುವರೆದು ಸದರಿ 43 ತಾಲ್ಲೂಕು ಯೋಜನಾ ಘಟಕಗಳಿಗೆ ತಾಲ್ಲೂಕು ಯೋಜನಾಧಿಕಾರಿಗಳನ್ನು ನೇಮಿಸುವ ಸಲುವಾಗಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ 43 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ರಾಜ್ಯ ವಲಯದಿಂದ ಜಿಲ್ಲಾ ಪಂಚಾಯತ್ ವಲಯಕ್ಕೆ ಕೆಳಕಂಡಂತೆ ವರ್ಗಾಯಿಸಿ ಆದೇಶಿಸಲಾಗಿದೆ.

3. ಅದರಂತೆಯೆ ಸಂಬಂಧಪಟ್ಟ ಆಯಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ತಾಲ್ಲೂಕು ಪಂಚಾಯತ್‌ಗಳ ಕಾರ್ಯನಿರ್ವಾಹಕ ಅಧಿಕಾರಿಗಳು ಸದರಿ ತಾಲ್ಲೂಕು ಯೋಜನಾಧಿಕಾರಿ ಹುದ್ದೆಗೆ ಅಗತ್ಯವಿರುವ ವೇತನ ಮತ್ತು ಇತರೆ ಭತ್ಯೆಗಳಿಗಾಗಿ ಅನುದಾನವನ್ನು ಒದಗಿಸಿಕೊಳ್ಳಲು ಸೂಕ್ತ ಕ್ರಮಕೈಗೊಳ್ಳುವಂತೆ ಸೂಚಿಸಿದೆ.

4. ತಾಲ್ಲೂಕು ಯೋಜನಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ನಿಗದಿಪಡಿಸಿರುವಂತೆ ತಮ್ಮ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸತಕ್ಕದ್ದು.

**ಎರಡನೇ ಹಂತದಲ್ಲಿ ಸೃಜಿಸಲಾದ 43 ತಾಲ್ಲೂಕು ಯೋಜನಾ ಘಟಕಗಳ ಹಾಗೂ ರಾಜ್ಯ ವಲಯದಿಂದ ಜಿಲ್ಲಾ ಪಂಚಾಯತ್ ವಲಯಕ್ಕೆ ವರ್ಗಾಯಿಸಲಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ 43 ಸಹಾಯಕ ನಿರ್ದೇಶಕರ (ತಾಲ್ಲೂಕು ಯೋಜನಾಧಿಕಾರಿ) ಹುದ್ದೆಗಳ ವಿವರ ಕೆಳಕಂಡಂತಿವೆ.**

| ಕ್ರಮ ಸಂಖ್ಯೆ | ತಾಲ್ಲೂಕು ಯೋಜನಾಧಿಕಾರಿ ಹುದ್ದೆಯಾಗಿ ರಾಜ್ಯ ವಲಯದಿಂದ ಜಿಲ್ಲಾ ಪಂಚಾಯತ್ ವಲಯಕ್ಕೆ ವರ್ಗಾಯಿಸಲು ಗುರುತಿಸಲಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಹಾಯಕ ನಿರ್ದೇಶಕರ ಹುದ್ದೆಯ ಕಚೇರಿ | ಎರಡನೇ ಹಂತವಾಗಿ ಸೃಜಿಸಲಾದ ತಾಲ್ಲೂಕು ಯೋಜನಾ ಘಟಕದ ಹಾಗೂ ರಾಜ್ಯ ವಲಯದಿಂದ ಜಿಲ್ಲಾ ಪಂಚಾಯತ್ ವಲಯಕ್ಕೆ ತಾಲ್ಲೂಕು ಯೋಜನಾಧಿಕಾರಿ ಹುದ್ದೆ ವರ್ಗಾವಣೆಗೊಂಡ ತಾಲ್ಲೂಕು ಪಂಚಾಯತ್ |
|---|---|---|
| 1 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಸಿರಗುಪ್ಪ, ಬಳ್ಳಾರಿ ಜಿಲ್ಲೆ. |

| | | |
|---|---|---|
| 2 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ. |
| 3 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಹೂವಿನಹಡಗಲಿ, ಬಳ್ಳಾರಿ ಜಿಲ್ಲೆ. |
| 4 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಕೊಪ್ಪಳ, ಕೊಪ್ಪಳ ಜಿಲ್ಲೆ. |
| 5 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಗಂಗಾವತಿ, ಕೊಪ್ಪಳ ಜಿಲ್ಲೆ. |
| 6 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ರಾಯಚೂರು, ರಾಯಚೂರು ಜಿಲ್ಲೆ. |
| 7 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಬದಾಮಿ, ಬಾಗಲಕೋಟೆ ಜಿಲ್ಲೆ. |
| 8 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಸವದತ್ತಿ, ಬೆಳಗಾಂ ಜಿಲ್ಲೆ. |
| 9 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ರಾಯಬಾಗ್, ಬೆಳಗಾಂ ಜಿಲ್ಲೆ. |
| 10 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಬೈಲಹೊಂಗಲ್, ಬೆಳಗಾಂ ಜಿಲ್ಲೆ. |
| 11 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ರಾಮದುರ್ಗ, ಬೆಳಗಾಂ ಜಿಲ್ಲೆ. |
| 12 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಹುಕ್ಕೇರಿ, ಬೆಳಗಾಂ ಜಿಲ್ಲೆ. |
| 13 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಬಿಜಾಪುರ, ಬಿಜಾಪುರ ಜಿಲ್ಲೆ. |
| 14 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ನವಲಗುಂದ, ಧಾರವಾಡ ಜಿಲ್ಲೆ. |
| 15 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಕುಂದಗೋಳ, ಧಾರವಾಡ ಜಿಲ್ಲೆ. |
| 16 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಶಿರಹಟ್ಟಿ, ಗದಗ ಜಿಲ್ಲೆ. |
| 17 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಶಿಗ್ಗಾಂವ್ ಹಾವೇರಿ ಜಿಲ್ಲೆ. |
| 18 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಹಾವೇರಿ, ಹಾವೇರಿ ಜಿಲ್ಲೆ. |
| 19 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಛೇರಿ, ಬೆಂಗಳೂರು. | ತಾಲ್ಲೂಕು ಪಂಚಾಯತ್, ಬ್ಯಾಡಗಿ, ಹಾವೇರಿ ಜಿಲ್ಲೆ. |
| 20 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಬಾಗಲಕೋಟೆ | ತಾಲ್ಲೂಕು ಪಂಚಾಯತ್, ಹಾನಗಲ್, ಹಾವೇರಿ ಜಿಲ್ಲೆ. |
| 21 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಬೆಂಗಳೂರು (ಗ್ರಾಮಾಂತರ) | ತಾಲ್ಲೂಕು ಪಂಚಾಯತ್, ಅಂಕೋಲ, ಉತ್ತರ ಕನ್ನಡ ಜಿಲ್ಲೆ. |
| 22 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಬೆಂಗಳೂರು (ನಗರ) | ತಾಲ್ಲೂಕು ಪಂಚಾಯತ್, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ. |
| 23 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಬಳ್ಳಾರಿ | ತಾಲ್ಲೂಕು ಪಂಚಾಯತ್, ಆನೇಕಲ್, ಬೆಂಗಳೂರು ನಗರ ಜಿಲ್ಲೆ. |
| 24 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಬೀದರ್ | ತಾಲ್ಲೂಕು ಪಂಚಾಯತ್, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 25 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಬೆಳಗಾವಿ | ತಾಲ್ಲೂಕು ಪಂಚಾಯತ್, ಹಿರಿಯೂರು, ಚಿತ್ರದುರ್ಗ ಜಿಲ್ಲೆ. |
| 26 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಬಿಜಾಪುರ | ತಾಲ್ಲೂಕು ಪಂಚಾಯತ್, ಹೊಳಲ್ಕೆರೆ ಚಿತ್ರದುರ್ಗ ಜಿಲ್ಲೆ. |

| | | |
|---|---|---|
| 27 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಚಾಮರಾಜನಗರ | ತಾಲ್ಲೂಕು ಪಂಚಾಯತ್, ಚಳ್ಳಕೆರೆ ಚಿತ್ರದುರ್ಗ ಜಿಲ್ಲೆ. |
| 28 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಚಿಕ್ಕಮಗಳೂರು | ತಾಲ್ಲೂಕು ಪಂಚಾಯತ್, ಹೊನ್ನಾಳಿ ದಾವಣಗೆರೆ ಜಿಲ್ಲೆ. |
| 29 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಚಿತ್ರದುರ್ಗ | ತಾಲ್ಲೂಕು ಪಂಚಾಯತ್, ಜಗಳೂರು ದಾವಣಗೆರೆ ಜಿಲ್ಲೆ. |
| 30 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ದಾವಣಗೆರೆ | ತಾಲ್ಲೂಕು ಪಂಚಾಯತ್, ಗುಡಿಬಂಡೆ ಕೋಲಾರ ಜಿಲ್ಲೆ. |
| 31 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ದಕ್ಷಿಣ ಕನ್ನಡ | ತಾಲ್ಲೂಕು ಪಂಚಾಯತ್, ಗೌರಿಬಿದನೂರು ಕೋಲಾರ ಜಿಲ್ಲೆ. |
| 32 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಧಾರವಾಡ | ತಾಲ್ಲೂಕು ಪಂಚಾಯತ್, ಶ್ರೀನಿವಾಸಪುರ ಕೋಲಾರ ಜಿಲ್ಲೆ. |
| 33 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಗುಲ್ಬರ್ಗಾ | ತಾಲ್ಲೂಕು ಪಂಚಾಯತ್, ಮಾಲೂರು ಕೋಲಾರ ಜಿಲ್ಲೆ. |
| 34 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಹಾವೇರಿ | ತಾಲ್ಲೂಕು ಪಂಚಾಯತ್, ಸೊರಬ ಶಿವಮೊಗ್ಗ ಜಿಲ್ಲೆ. |
| 35 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಕೊಡಗು | ತಾಲ್ಲೂಕು ಪಂಚಾಯತ್, ತುರವೇಕೆರೆ ತುಮಕೂರು ಜಿಲ್ಲೆ. |
| 36 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಕೊಪ್ಪಳ | ತಾಲ್ಲೂಕು ಪಂಚಾಯತ್, ಕೊರಟಗೆರೆ ತುಮಕೂರು ಜಿಲ್ಲೆ. |
| 37 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಮಂಡ್ಯ | ತಾಲ್ಲೂಕು ಪಂಚಾಯತ್, ಚಿಕ್ಕನಾಯಕನಹಳ್ಳಿ ತುಮಕೂರು ಜಿಲ್ಲೆ. |
| 38 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಮೈಸೂರು | ತಾಲ್ಲೂಕು ಪಂಚಾಯತ್, ಕೊಳ್ಳೆಗಾಲ ಚಾಮರಾಜನಗರ ಜಿಲ್ಲೆ. |
| 39 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ರಾಮನಗರ | ತಾಲ್ಲೂಕು ಪಂಚಾಯತ್, ಹೊಳೆನರಸೀಪುರ ಹಾಸನ ಜಿಲ್ಲೆ. |
| 40 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಶಿವಮೊಗ್ಗ | ತಾಲ್ಲೂಕು ಪಂಚಾಯತ್, ಕೃಷ್ಣರಾಜಪೇಟೆ, ಮಂಡ್ಯ ಜಿಲ್ಲೆ. |
| 41 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ತುಮಕೂರು | ತಾಲ್ಲೂಕು ಪಂಚಾಯತ್, ಟಿ. ನರಸೀಪುರ ಮೈಸೂರು ಜಿಲ್ಲೆ. |
| 42 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಉಡುಪಿ | ತಾಲ್ಲೂಕು ಪಂಚಾಯತ್, ನಂಜನಗೂಡು, ಮೈಸೂರು ಜಿಲ್ಲೆ. |
| 43 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿ, ಉತ್ತರ ಕನ್ನಡ | ತಾಲ್ಲೂಕು ಪಂಚಾಯತ್, ಗುಲ್ಬರ್ಗಾ, ಗುಲ್ಬರ್ಗಾ ಜಿಲ್ಲೆ. |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ ಆಇ 308 ವೆಚ್ಚ–6 2010 ದಿನಾಂಕ: 30–08–2010 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗೂ ಸಚಿವ ಸಂಪುಟದ ಪ್ರಕರಣ ಸಂಖ್ಯೆ: ಸಿ 543/2010 ದಿನಾಂಕ: 09–10–2010 ರಲ್ಲಿ ದೊರೆತಿರುವ ಅನುಮೋದನೆಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಸಾಯಿಬಾಬಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ, (ಎಸ್–5)

ಪಿ.ಆರ್. 2862

## ಸಾರ್ವಜನಿಕ ಉದ್ದಿಮೆಗಳ ಸಚಿವಾಲಯ

**ವಿಷಯ** : ಸಾರ್ವಜನಿಕ ಉದ್ದಿಮೆಗಳು ನಿಗಮ/ಮಂಡಳಿ ಹಾಗೂ ಶಾಸನ ಬದ್ಧ ಸಂಸ್ಥೆಗಳ ಅಧಿಕಾರೇತರ ಅಧ್ಯಕ್ಷರುಗಳ ಗೌರವ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ** : (1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ (ಬಿಪಿಇ) 62 ಎಸ್‌ಪಿಯು 1998 ದಿನಾಂಕ : 18–06– 1998.
(2) ಪತ್ರ ಸಂಖ್ಯೆ: ಐಟಿಡಿ 39 ಡಿಐಎಸ್ 2009, ದಿನಾಂಕ : 09-11-2009
(3) ಪತ್ರ ಸಂಖ್ಯೆ: ಐಟಿಡಿ 04 ಡಿಐಎಸ್ 2010, ದಿನಾಂಕ : 08–02–2010.

***

**ಪ್ರಸ್ತಾವನೆ :**

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು ಶ್ರೀ ಎಂ. ಯಂಗಾರೆಡ್ಡಿ, ಅಧ್ಯಕ್ಷರು, ಕಿಯೋನಿಕ್ಸ್, ಸಂಸ್ಥೆ, ಬೆಂಗಳೂರು ಇವರು ಮಾನ್ಯ ಅಬಕಾರಿ, ವಾರ್ತಾ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ಬೆಂಗಳೂರು ಜಲ ಮಂಡಳಿ ಸಚಿವರಿಗೆ ಕಳುಹಿಸಿರುವ ದಿನಾಂಕ: 21–08–2009ರ ಮೂಲ ಮನವಿ ಪತ್ರದ ಪ್ರತಿಯನ್ನು ಅಗತ್ಯ ಕ್ರಮಕ್ಕಾಗಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ಕಳುಹಿಸಿದೆ.

ಅದರಲ್ಲಿ ಕಿಯೋನಿಕ್ಸ್ ಸಂಸ್ಥೆಯ ಅಧ್ಯಕ್ಷರುಗಳಿಗೆ ನೀಡಿರುವ ಗೌರವ ಧನ ಕೇವಲ ರೂ. 3,500/– ಇದ್ದು 20 ವರ್ಷಗಳ ಹಿಂದೆ ನಿಗದಿ ಪಡಿಸಿದ್ದು ಇದು ಅತಿ ಕಡಿಮೆಯಾಗಿರುವ ಕಾರಣ ಅಧ್ಯಕ್ಷರುಗಳ ಗೌರವ ಧನವನ್ನು ಮಾಹೆಯಾನ ರೂ. 10,000/– ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಬೇಕೆಂದು ಕೋರಿದ್ದಾರೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು ಶ್ರೀ ಎಂ. ಯಂಗಾರೆಡ್ಡಿ, ಅಧ್ಯಕ್ಷರು, ಕಿಯೋನಿಕ್ಸ್ ಸಂಸ್ಥೆ, ಬೆಂಗಳೂರು ಇವರಿಗೆ ನೀಡುತ್ತಿರುವ ಗೌರವ ಧನ ರೂ. 3,500/– ರಿಂದ ರೂ. 7,500/– ಕ್ಕೆ ಹೆಚ್ಚಿಸುವ ಬಗ್ಗೆ ಸಂಸ್ಥೆಯ ಆಡಳಿತ ಮಂಡಳಿಯ 152ನೇ ಸಭೆಯಲ್ಲಿ ನಿರ್ಧರಿಸಿದ್ದು, ಅದರಂತೆ ಹಾಲಿ ಕಿಯೋನಿಕ್ಸ್ ಸಂಸ್ಥೆಯ ಅಧ್ಯಕ್ಷರು ಅಧಿಕಾರ ವಹಿಸಿಕೊಂಡ ದಿನಾಂಕದಿಂದ ಗೌರವಧನವನ್ನು ರೂ. 3500/– ರಿಂದ ರೂ. 7,500/– ಕ್ಕೆ ಹೆಚ್ಚಿಸಲು ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಸಹಮತಿ ಕೋರಿದ್ದಾರೆ.

ಪ್ರಸ್ತುತ ಜೀವನ ಮಟ್ಟವು ಸುಧಾರಿಸಿರುವುದನ್ನು ಗಮನದಲ್ಲಿಟ್ಟುಕೊಂಡು ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ನಿಗಮ ಮಂಡಳಿ ಹಾಗೂ ಶಾಸನಬದ್ಧ ಸಂಸ್ಥೆಗಳ ಅಧ್ಯಕ್ಷರುಗಳಿಗೆ ಗೌರವ ಧನವನ್ನು ರೂ. 9,000–00 ಕ್ಕೆ ಹೆಚ್ಚಿಸಲು ನಿರ್ಧರಿಸಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ

ಸಹಮತಿಗಾಗಿ ಕಳುಹಿಸಲಾಗಿತ್ತು. ಆರ್ಥಿಕ ಇಲಾಖೆಯು ನಿಗಮಗಳ ಅಧಿಕಾರೇತರ ಅಧ್ಯಕ್ಷರುಗಳಿಗೆ ಮಾಹೆಯಾನ ರೂ. 9,000/– ಗಳ ಗೌರವ ಧನವನ್ನು ನೀಡಲು ತನ್ನ ಸಹಮತಿ ವ್ಯಕ್ತ ಪಡಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಾಉಇ 68 ಎಸ್‌ಪಿಯು 2009, ಬೆಂಗಳೂರು, ದಿನಾಂಕ: 21–10–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸಾರ್ವಜನಿಕ ಉದ್ದಿಮೆಗಳು/ನಿಗಮ ಮಂಡಳಿ ಹಾಗೂ ಶಾಸನ ಬದ್ಧ ಸಂಸ್ಥೆಗಳ ಅಧಿಕಾರೇತರ ಅಧ್ಯಕ್ಷರುಗಳಿಗೆ ಗೌರವ ಧನವನ್ನು ರೂ. 3,500 ರಿಂದ ರೂ. 9,000/– (ರೂಪಾಯಿ ಒಂಭತ್ತು ಸಾವಿರ ಮಾತ್ರ) ಗಳವರೆಗೆ ಹೆಚ್ಚಿಸಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ 76 (ವೆಚ್ಚ–2) 2010, ದಿನಾಂಕ: 06–09–2010ರನ್ವಯ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಫ್. ಹುಬ್ಬಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ (2)
ಸಾರ್ವಜನಿಕ ಉದ್ದಿಮೆಗಳ ಇಲಾಖೆ

ಪಿ.ಆರ್. 2863

## ಇಂಧನ ಸಚಿವಾಲಯ

**ವಿಷಯ** : ರಾಜ್ಯದಲ್ಲಿ ಬೆಳಕು ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ಕ್ರಿಯಾ ಯೋಜನೆಯನ್ನು ರೂಪಿಸಲು ಒಂದು ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ** : ದಿನಾಂಕ: 19–10–2010 ರಂದು ಮಾನ್ಯ ಇಂಧನ ಸಚಿವರ ಅಧ್ಯಕ್ಷತೆಯಲ್ಲಿ ಬುರುಡೆ ಬಲ್ಬುಗಳನ್ನು (Incandescent Bulb) ಸಿ.ಎಫ್.ಎಲ್. (CFL) ಬಲ್ಬುಗಳಿಗೆ ಬದಲಾಯಿಸುವ ಬಗ್ಗೆ ನಡೆದ ಸಭೆಯ ನಡವಳಿ.

***

**ಪ್ರಸ್ತಾವನೆ :**

ರಾಜ್ಯದಲ್ಲಿ ವಿದ್ಯುತ್ ಕೊರತೆಯನ್ನು ನಿವಾರಿಸಲು ವಿದ್ಯುತ್ ಉಳಿತಾಯ ಅತಿ ಶೀಘ್ರದ ಪರಿಹಾರವಾಗಿರುವುದರಿಂದ ಹಾಗೂ ಹಾಲಿ ಇರುವ ಬುರುಡೆ ಬಲ್ಬುಗಳನ್ನು (Incandescent Bulb) ಸಿ.ಎಫ್.ಎಲ್. (CFL) ಗಳಿಗೆ ಬದಲಾಯಿಸುವುದರಿಂದ ಅತಿ ಹೆಚ್ಚಿನ ವಿದ್ಯುತ್ ಉಳಿತಾಯವಾಗುವುದೆಂದು ಮತ್ತು ಇದರಿಂದ ವಿದ್ಯುತ್ ಸಮಸ್ಯೆ ಸಾಕಷ್ಟು ಕಡಿಮೆಯಾಗುವುದರಿಂದ ಕೂಡಲೇ ಬುರುಡೆ ಬಲ್ಬುಗಳನ್ನು ಸಿ.ಎಫ್.ಎಲ್. ಬಲ್ಬುಗಳಿಗೆ ಬದಲಾಯಿಸುವ "ಬೆಳಕು ಯೋಜನೆ" ಯನ್ನು ಅನುಷ್ಠಾನಗೊಳಿಸುವುದು ಸೂಕ್ತವಾಗಿರುತ್ತದೆ.

ದಿನಾಂಕ: 19–10–2010ರಂದು ಮಾನ್ಯ ಇಂಧನ ಸಚಿವರ ಅಧ್ಯಕ್ಷತೆಯಲ್ಲಿ, ಬುರುಡೆ ಬಲ್ಬುಗಳನ್ನು (Incandescent Bulb) ಸಿ.ಎಫ್.ಎಲ್. (CFL) ಗಳಿಗೆ ಬದಲಾಯಿಸುವ ಬಗ್ಗೆ ಸಭೆ ನಡೆದಿದೆ. ಈ ಸಭೆಯಲ್ಲಿ ರಾಜ್ಯದಲ್ಲಿರುವ ಬುರುಡೆ ಬಲ್ಬುಗಳನ್ನು (Incandescent Bulb) ಸಿ.ಎಫ್.ಎಲ್. (CFL) ಗಳಿಗೆ ಬದಲಾಯಿಸುವ "ಬೆಳಕು ಯೋಜನೆ" ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರಲು ತೀರ್ಮಾನಿಸಲಾಯಿತು.

ಮೇಲೆ ತಿಳಿಸಿದ ಸಭೆಯ ತೀರ್ಮಾನದಂತೆ ಕ್ರಮ ಕೈಗೊಳ್ಳಲು ಒಂದು ಕ್ರಿಯಾ ಯೋಜನೆಯನ್ನು ಸಿದ್ದಪಡಿಸಬೇಕಾಗಿದ್ದು, ಈ ಕೆಳಕಂಡವರನ್ನೊಳಗೊಂಡ ಒಂದು ಸಮಿತಿ ರಚಿಸಲು ತೀರ್ಮಾನಿಸಿದೆ. ಆದುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 441 ಎನ್‌ಸಿಇ 2010, ಬೆಂಗಳೂರು, ದಿನಾಂಕ: 25–11–2010**

ರಾಜ್ಯದಲ್ಲಿ ವಿದ್ಯುತ್ ಉಳಿತಾಯ ಮಾಡಲು "ಬೆಳಕು ಯೋಜನೆ" ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಒಂದು ಕಾರ್ಯಯೋಜನೆಯನ್ನು ರಚಿಸಲು ರಾಜ್ಯ ಸರ್ಕಾರವು ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಿದೆ:–

| | | |
|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 4. | ಸರ್ಕಾರದ ಕಾರ್ಯದರ್ಶಿ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | ಸದಸ್ಯರು |
| 5. | ಮಾನ್ಯ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರು | ಸದಸ್ಯರು |
| 6. | ವ್ಯವಸ್ಥಾಪಕ ನಿರ್ದೇಶಕರು, ಕ.ವಿ.ಪ್ರ.ನಿ.ನಿ. | ಸದಸ್ಯರು |
| 7. | ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ವ್ಯವಸ್ಥಾಪಕ ನಿರ್ದೇಶಕರುಗಳು | ಸದಸ್ಯರು |
| 8 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2864

## ಯುವಜನ ಸೇವಾ ಸಚಿವಾಲಯ

**ವಿಷಯ** : ಬಂಡವಾಳ ವೆಚ್ಚದ ಅಡಿಯಲ್ಲಿ 2010–11ನೇ ಆರ್ಥಿಕ ವರ್ಷದಲ್ಲಿ ಬಿಡುಗಡೆ ಮಾಡಲಾದ ಅನುದಾನವನ್ನು ಸೆಳೆಯುವ ಕಾರ್ಯವಿಧಾನ– ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ** : (1) ಸುತ್ತೋಲೆ ಸಂಖ್ಯೆ: ಆಇ 01 ಟಿಎಫ್‌ಸಿ 2009, ದಿನಾಂಕ: 31–01–2009.

(2) ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ನಿರ್ದೇಶಕರವರ ಪತ್ರ ಸಂಖ್ಯೆ: ಡಿವೈಎಸ್‌ಎಸ್/ಕ್ರೀಯೋ–2/ಎಂಪಿಕ್/2010–11, ದಿನಾಂಕ: 18–10–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 31–01–2009ರ ಸುತ್ತೋಲೆಯಲ್ಲಿ ಯೋಜನೆಗಳು/ಕಾಮಗಾರಿಗಳಿಗೆ ಸಂಬಂಧಪಟ್ಟಂತೆ ಬಿಡುಗಡೆ ಮಾಡಿರುವ ಹಣದ ಉಪಯೋಗಕ್ಕೆ ಸಂಬಂಧಪಟ್ಟಂತೆ ಸೂಚನೆಗಳನ್ನು ನೀಡಿದ್ದು, ಅದರಂತೆ ಸರ್ಕಾರದಿಂದ ಬಿಡುಗಡೆ ಮಾಡಲ್ಪಟ್ಟ ಅನುದಾನವನ್ನು ಜಿಲ್ಲಾಧಿಕಾರಿಗಳು/ಇಲಾಖಾಧಿಕಾರಿಗಳು ಸವಿವರ ಸಾದಿಲ್ವಾರು ಬಿಲ್ಲಿನ ಮೇಲೆ (DC Bill) ಪಡೆಯಲು ಅವಕಾಶ ಕಲ್ಪಿಸಲಾಗಿದೆ. ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 4202–03–102–0–1–03, 386 ಬಂಡವಾಳ ವೆಚ್ಚ ಒಳಾಂಗಣ ಕ್ರೀಡಾಂಗಣ (ಯೋಜನೆ) ನಿರ್ಮಾಣದಡಿಯಲ್ಲಿ ರೂ. 3000 ಗಳನ್ನು ಕ್ರೀಡಾಂಗಣ ಹಾಗೂ ಕ್ರೀಡಾ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಹಂಚಿಕೆ ಮಾಡಲಾಗಿದ್ದು, ಸವಿವರ ಸಾದಿಲ್ವಾರು ಬಿಲ್ಲಿನ ಮೇಲೆ (DC Bill) ಡ್ರಾ ಮಾಡುವ ವ್ಯವಸ್ಥೆಯಲ್ಲಿ ತೀವ್ರ ವಿಳಂಬ ಉಂಟಾಗುತ್ತಿದ್ದು, ಯೋಜನಾ ಕಾರ್ಯಕ್ರಮಗಳು ಕುಂಠಿತವಾಗುತ್ತಿರುವುದರಿಂದ ಸದರಿ ಸುತ್ತೋಲೆಯಿಂದ ವಿನಾಯಿತಿ ನೀಡಿ ಪ್ರತಿ ಯೋಜನೆಗೆ ಸಂಬಂಧಿಸಿದ ಅನುದಾನ ಪಡೆಯುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಜಿಲ್ಲಾ ಕ್ರೀಡಾಂಗಣ ಸಮಿತಿ ಇವರಿಗೆ ಪ್ರಾಧೀಕರಿಸಿ ಅನುದಾನ ಸಂಹಿತೆ ಬಿಲ್ಲಿನಡಿ ಅನುದಾನ ಸೆಳೆಯುವುದಕ್ಕೆ ಹಾಗೂ ಸದರಿ ಬಿಲ್‌ಗಳಲ್ಲಿ ನಿರ್ದೇಶರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಪ್ರತಿ ರುಜುಗೊಳಿಸಿ ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಸಂಬಂಧಪಟ್ಟ ಜಿಲ್ಲೆಗಳಿಗೆ ಬಿಡುಗಡೆಗೊಂಡ ಅನುದಾನವನ್ನು ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಕ್ರೀಡಾಂಗಣ ಸಮಿತಿ ಇವರ ಪದನಾಮದಲ್ಲಿ ಚೆಕ್‌ಅನ್ನು ಪಡೆದು ವಿತರಿಸಲು ಪ್ರಾಧೀಕರಿಸಿ ಸರ್ಕಾರಿ ಆದೇಶ ಹೊರಡಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 238 ಯುಸೇಕ್ರೀ 2010, ಬೆಂಗಳೂರು, ದಿನಾಂಕ: 22–11–2010**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳಿಂದಾಗಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕ್ರೀಡಾಂಗಣ ಮತ್ತು ಕ್ರೀಡಾ ಮೂಲಸೌಲಭ್ಯ ಅಭಿವೃದ್ಧಿ ಯೋಜನೆಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಜಾರಿಗೊಳಿಸುವ ಏಜೆನ್ಸೀ (Implementing agencies) ಆಗಿರುವುದರಿಂದ ಲೆಕ್ಕ ಶೀರ್ಷಿಕೆ 4202–03–102–0–1–03, 386 ಬಂಡವಾಳ ವೆಚ್ಚ (ಯೋಜನೆ) ಇದರಡಿಯಲ್ಲಿ ಒಳಾಂಗಣ ಕ್ರೀಡಾಂಗಣ ಯೋಜನೆ ಅನುಷ್ಠಾನಕ್ಕಾಗಿ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಕ್ರೀಡಾಂಗಣ ಸಮಿತಿ ಇವರು ಸ್ವೀಕರ್ತನ ರಸೀದಿ (payees receipts) ಯಲ್ಲಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರ ಮೇಲು ರುಜುವಿನೊಂದಿಗೆ ಹಣ ಸೆಳೆಯಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 788 ವೆಚ್ಚ–7/2010, ದಿನಾಂಕ: 19–11–2010ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಯುವಜನ ಸೇವಾ ಇಲಾಖೆ

ಪಿ.ಆರ್. 2865

## ಶಿಕ್ಷಣ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಇಡಿ 34 ಎಸ್ ಟಿಬಿ 2010 ಬೆಂಗಳೂರು, ದಿನಾಂಕ 24–01–2011**

**ವಿಷಯ** : ಭಾರತದ ಜನಗಣತಿ 2011– ಮನೆಗಳ ಪಟ್ಟಿ ಮಾಡುವುದು ಮತ್ತು ಮನೆಯಲ್ಲಿರುವ ಜನರ ಗಣತಿ ಮಾಡುವುದು ಹಾಗೂ ರಾಷ್ಟ್ರ ಜನಸಂಖ್ಯೆ ನೋಂದಣಿ ಪುಸ್ತಕವನ್ನು ಸಿದ್ದಪಡಿಸುವ ಪ್ರಕ್ರಿಯೆಯಲ್ಲಿ ಶಾಲಾ ಶಿಕ್ಷಕರನ್ನು ನಿಯುಕ್ತಿಗೊಳಿಸುವ ಕುರಿತು

**ಉಲ್ಲೇಖ:** (1) ದಿನಾಂಕ: 10–01–2011ರ ಭಾರತ ಸರ್ಕಾರದ ಗೃಹ ಮಂತ್ರಾಲಯದ ಜನಗಣತಿ ನಿರ್ದೇಶಕರ ಅ.ಸ.ಪತ್ರ ಸಂಖ್ಯೆ: C&T/7/C&T/ORG/2010

(2) ದಿನಾಂಕ: 15–03–2010 ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 34 ಎಸ್‌ಟಿಬಿ 2010

(3) ದಿನಾಂಕ 29–11–2010ರ ಸಮಸಂಖ್ಯೆಯ ಸುತ್ತೋಲೆ

1 2011 ನೇ ಸಾಲಿನ ಜನಗಣತಿ ಕಾರ್ಯಕ್ರಮದಲ್ಲಿ ಶಾಲಾಶಿಕ್ಷಕರುಗಳು ಭಾಗವಹಿಸಲು 2011ರ ಫೆಬ್ರವರಿ 5 ರವರೆಗೆ ಉಲ್ಲೇಖ 3ರ ಸುತ್ತೋಲೆಯನ್ವಯ ಅನುಮತಿ ನೀಡಲಾಗಿದೆ.

2 ಪ್ರಸ್ತುತ, ದಿನಾಂಕ 10–01–2011ರ ಉಲ್ಲೇಖಿತ ಪತ್ರದಲ್ಲಿ ಭಾರತ ಸರ್ಕಾರದ ಗೃಹ ಮಂತ್ರಾಲಯದ ಜನಗಣತಿ ನಿರ್ದೇಶಕರು ಶಾಲಾ ಶಿಕ್ಷಕರುಗಳಿಗೆ ಫೆಬ್ರವರಿ 7ರಿಂದ ಮಾರ್ಚ್ 8 2011ರವರೆಗೆ ಸದರಿ ಜನಗಣತಿ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅನುಮತಿಸುವ ಕುರಿತು ಪ್ರಸ್ತಾಪಿಸಿರುತ್ತಾರೆ.

3 ಈ ಹಿನ್ನೆಲೆಯಲ್ಲಿ ದಿನಾಂಕ 07–02–2011ರಿಂದ 08–03–2011ರ ಜನಗಣತಿ ಕಾರ್ಯದಲ್ಲಿ ಶಾಲಾ ಶಿಕ್ಷಕರುಗಳು ಶೈಕ್ಷಣಿಕ ಚಟುವಟಿಕೆಗಳಿಗೆ ಧಕ್ಕೆ ಉಂಟಾಗದಂತೆ, ಅರ್ಧ ದಿನ ಶೈಕ್ಷಣಿಕ ಚಟುವಟಿಕೆಗಳಿಗೆ ಹಾಗೂ ಉಳಿದ ಅರ್ಧ ದಿನವನ್ನು ಜನಗಣತಿ ಕಾರ್ಯಕ್ರಮದಲ್ಲಿ ತೊಡಗಿಸಿಕೊಳ್ಳಲು ಅರ್ಧದಿನ ಅವಧಿಗೆ ಮಾತ್ರ ಅನುಮತಿ ನೀಡಲಾಗಿದೆ. ಜನಗಣತಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸಂಬಂಧಿಸಿದ ಶಿಕ್ಷಕರುಗಳಿಗೆ ಅರ್ಧದಿನದ ಅವಧಿಗೆ ತಮಗೆ ಅನುಕೂಲವಾಗುವ ರೀತಿಯಲ್ಲಿ ಶಾಲೆ / ಕಛೇರಿಯನ್ನು ಬಿಡಲು ಅನುಮತಿ ನೀಡಲಾಗಿದೆ.

**ಎಂ. ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ

ಪಿ.ಆರ್ 204

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎ. ಬಸವಂತರಾಯ್, ನಿವೃತ್ತ ಕೆ.ಎ.ಎಸ್. ಅಧಿಕಾರಿ, ಇವರಿಗೆ ತಹಶೀಲ್ದಾರರ ವೃಂದದಲ್ಲಿ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂ ಚಾಲಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಅಧಿಕಾರಿಯ ಮನವಿ ದಿನಾಂಕ 13–12–2008 ಮತ್ತು 25–03–2009.
**2.** ಸರ್ಕಾರದ ಅಧಿಸೂಚನೆ ಸಂ : ಎಫ್‌ಡಿ 105 ಎಸ್‌ಆರ್‌ಪಿ (ಪಿಎಸ್‌ಪಿ) 82, ದಿನಾಂಕ 08.06.1983 ಮತ್ತು ಅಧಿಸೂಚನೆ ಸಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿ: 29–10–1991.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1) ರಲ್ಲಿ ಶ್ರೀ ಎ. ಬಸವಂತರಾಯ್, ನಿವೃತ್ತ ಕೆ.ಎ.ಎಸ್. ಅಧಿಕಾರಿ, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ದಿನಾಂಕ 02–08–1976 ರಂದು ತಹಶೀಲ್ದಾರ್ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 06.06.1984 ರಂದು ಕೆ.ಎ.ಎಸ್. (ಕಿರಿಯ ಶ್ರೇಣಿ) ಹುದ್ದೆಗೆ ಬಡ್ತಿ ಹೊಂದಿದ್ದರೂ, ಅರ್ಹತಾ ದಿನಾಂಕವನ್ನು ದಿನಾಂಕ 20–04–1995 ರಂದು ನಿಗದಿಪಡಿಸಿದ್ದರಿಂದ ತಹಶೀಲ್ದಾರ್ ವೃಂದದಲ್ಲಿಯೇ ಸತತವಾಗಿ 15 ವರ್ಷಗಳಿಗೂ ಅಧಿಕ ಸೇವೆ ಸಲ್ಲಿಸಿರುವುದರಿಂದ ತಮಗೆ 10 ವರ್ಷದ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷದ ಸ್ವಯಂ ಚಾಲಿತ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ 08–06–1983ರ ಮತ್ತು 29–10–1991ರ ಆದೇಶಗಳ ಅನ್ವಯ ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ ವೇತನ ಬಡ್ತಿ) ನಿಯಮಗಳು 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಪರಿಶೀಲಿಸಿ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 65 ಎಎಸ್‌ಡಿ 2009, ಬೆಂಗಳೂರು, ದಿನಾಂಕ : 03–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎ. ಬಸವಂತರಾಯ್, ನಿವೃತ್ತ ಕೆ.ಎ.ಎಸ್. ಅಧಿಕಾರಿ, ಇವರಿಗೆ ಈ ಕೆಳಕಂಡಂತೆ, ತಹಶೀಲ್ದಾರ್ ವೃಂದದಲ್ಲಿ ಅವರ ಹೆಸರಿನ ಮುಂದೆ ಸೂಚಿಸಿದ ದಿನಾಂಕದಿಂದ ಜಾರಿಗೆ ಬರುವಂತೆ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ, ವೇತನ, ಬಡ್ತಿ) ನಿಯಮಗಳು 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಮಂಜೂರು ಮಾಡಿ ಆದೇಶಿಸಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು–ಶ್ರೀ/ಶ್ರೀಮತಿ | ಕಾಲಮಿತಿ ವೇತನ ಬಡ್ತಿ ಮಂಜೂರಾತಿಯ ದಿನಾಂಕ | ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಮಂಜೂರಾತಿಯ ದಿನಾಂಕ |
|---|---|---|---|
| 1. | ಶ್ರೀ ಎ. ಬಸವಂತರಾಯ್ | 02–08–1986 | 02–08–1991 |

ಈ ಮೇಲಿನ ಅಧಿಕಾರಿಯು ಈ ಹಿಂದೆ ಕಾಲಮಿತಿ ವೇತನ ಬಡ್ತಿ ಸೌಲಭ್ಯಗಳನ್ನು ಪಡೆದಿದ್ದಲ್ಲಿ ಅದರಿಂದ ಲಭ್ಯವಾದ ಆರ್ಥಿಕ ಸೌಲಭ್ಯವು ಈ ಆದೇಶ ಹೊರಡಿಸಿದ ದಿನಾಂಕದಿಂದ ತಾನಾಗಿಯೇ ರದ್ದಾಗುತ್ತದೆ ಹಾಗೂ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ವಾಸ್ತವಿಕವಾಗಿ ಮುಂಬಡ್ತಿ ಪಡೆದ ದಿನಾಂಕದಿಂದ ಅದೇ ವೃಂದಕ್ಕೆ ಬಡ್ತಿಯು ಮುಂದೂಡಲ್ಪಟ್ಟು ನೀಡಲಾದ ಅರ್ಹ ದಿನಾಂಕದವರೆಗೆ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದದಲ್ಲಿ ಪಡೆದಿರುವ ಹೆಚ್ಚುವರಿ ವೇತನವನ್ನು ಕಟಾಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್. 2816

## ಕಂದಾಯ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಲು ಜಿಲ್ಲಾಧಿಕಾರಿ, ಬಿಜಾಪುರ ಇವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ಮುಮಕಾ/ 6185/ 2010, ದಿನಾಂಕ 15–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ಮಾನ್ಯ ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಲ್ಲಿ ಬಿಜಾಪುರ ಜಿಲ್ಲೆಯ, ಬಿಜಾಪುರ ತಾಲ್ಲೂಕಿನ ಧನ್ಯಾಳ ಗ್ರಾಮದಲ್ಲಿ 358 ಮನೆಗಳನ್ನು ಹಾಗೂ ಬಸವನ ಬಾಗೇವಾಡಿ ತಾಲ್ಲೂಕಿನ ಹುಣಶ್ಯಾಳ ಪಿ.ಸಿ. ಗ್ರಾಮದಲ್ಲಿ 350 ಮನೆಗಳನ್ನು ಒಟ್ಟು 708 ಮನೆಗಳನ್ನು

ಆಸರೆ ಯೋಜನೆಯಡಿಯಲ್ಲಿ ನಿರ್ಮಿಸುವ ಕಾರ್ಯವನ್ನು ಲೋಕೋಪಯೋಗಿ ಇಲಾಖೆಗೆ ನೀಡಲಾಗಿದ್ದು, ಈ ಸಂಬಂಧ ಅಂದಾಜು ವೆಚ್ಚ ರೂ. 10.27 ಕೋಟಿಗಳಾಗಿರುವುದಾಗಿ ತಿಳಿಸಲಾಗಿದೆ. ಈ ಬಾಬ್ತು ಮೊದಲನೇ ಕಂತಾಗಿ ರೂ.5.00 ಕೋಟಿ ಹಣವನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಯವರು ಆದೇಶಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 174 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ : 08–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಿಜಾಪುರ ಜಿಲ್ಲೆಯ, ಬಿಜಾಪುರ ತಾಲ್ಲೂಕಿನ ಧನ್ಯಾಳ ಗ್ರಾಮದಲ್ಲಿ 358 ಮನೆಗಳನ್ನು ಹಾಗೂ ಬಸವನ ಬಾಗೇವಾಡಿ ತಾಲ್ಲೂಕಿನ ಹುಣಶ್ಯಾಳ ಪಿ.ಸಿ. ಗ್ರಾಮದಲ್ಲಿ 350 ಮನೆಗಳನ್ನು ಒಟ್ಟು 708 ಮನೆಗಳನ್ನು ನಿರ್ಮಿಸಲು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ರೂ. 5.00 ಕೋಟಿ (ರೂ. ಐದು ಕೋಟಿಗಳು ಮಾತ್ರ) ಲೆಕ್ಕ ಶೀರ್ಷಿಕೆ 8235–00–111–0–02 "Public Contributions to Calamity Relief" ಅಡಿಯಲ್ಲಿ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಅನುದಾನ ವೆಚ್ಚ ಮಾಡಿದ್ದಕ್ಕೆ, ಸಂಬಂಧಪಟ್ಟ ಅಧಿಕಾರಿಗಳು ಹಣಬಳಕೆ ಪ್ರಮಾಣ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸುವುದು. ಹಾಗೂ ಕಾಮಗಾರಿಗಳ ಬಗ್ಗೆ ಭೌತಿಕ ಹಾಗೂ ಆರ್ಥಿಕ ಪ್ರಗತಿಯನ್ನು ಸಹ ಸರ್ಕಾರಕ್ಕೆ ಸಲ್ಲಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆ 8235–00–111–0–02 "Public Contributions to Calamity Relief" ಅಡಿಯಲ್ಲಿ ಡ್ರಾ ಮಾಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರು ಅನುದಾನ ಬಿಲ್ಲನ್ನು ತಯಾರಿಸಿ ಮೇಲು ರುಜು ಮಾಡಿ ಬಿಜಾಪುರ ಜಿಲ್ಲಾ ಖಜಾನೆಗಳಿಂದ ಡ್ರಾ ಮಾಡಿಕೊಳ್ಳಲು ಆದೇಶಿಸಿದೆ.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಗಂಗಾಧರ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿ.ನಿ. & ಸೇವೆಗಳು–2).

ಪಿ.ಆರ್. 2817

## ಕಂದಾಯ ಸಚಿವಾಲಯ

**ವಿಷಯ :** 2010ನೇ ಸಾಲಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಇವರ ಪತ್ರ ಸಂಖ್ಯೆ : ಸಿಎಎಲ್/ಸಿಆರ್/3/2010–11, ದಿನಾಂಕ : 27–9–2010.

2. ಸರ್ಕಾರದ ಆದೇಶ ಸಂ : ಕಂಇ 180 ಟಿಎನ್‌ಆರ್ 2010, ದಿನಾಂಕ 3–11–2010.

3. ಸರ್ಕಾರದ ಆದೇಶ ಸಂ : ಕಂಇ 180 ಟಿಎನ್‌ಆರ್ 2010, ದಿನಾಂಕ 04–11–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದ ಮೂಲಕ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ಪ್ರಕೃತಿ ವಿಕೋಪ ಹಾನಿ ಆಗಿರುವುದಕ್ಕೆ ಪರಿಹಾರ ಕಾರ್ಯ ಕೈಗೊಳ್ಳಲು ರೂ. 4.00 ಕೋಟಿ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಚಿತ್ರದುರ್ಗ ಜಿಲ್ಲೆಗೆ ರೂ. 50.00 ಲಕ್ಷ ಬಿಡುಗಡೆ ಮಾಡಿದೆ. ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 200.00 ಲಕ್ಷ ಬಿಡುಗಡೆ ಮಾಡಲಾಗಿದೆ. ಈಗ ಮತ್ತೆ ರೂ.50.00 ಲಕ್ಷ ಬಿಡುಗಡೆ ಮಾಡಲು ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 180 ಟಿಎನ್‌ಆರ್ 2010 (1), ಬೆಂಗಳೂರು, ದಿನಾಂಕ : 04–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರಿಗೆ ರೂ.50.00 (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಲಕ್ಷಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಮಂಜೂರು ಮಾಡಿರುವ ಮೊತ್ತವನ್ನು ಸಿ.ಆರ್.ಎಫ್. ಬ್ಯಾಂಕ್ ಖಾತೆಯಲ್ಲಿ ಲಭ್ಯವಿರುವ ಮೊತ್ತದಿಂದ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಗಂಗಾಧರ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ,

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2).

ಪಿ.ಆರ್. 2818

## ಕಂದಾಯ ಸಚಿವಾಲಯ

**ವಿಷಯ :** 2010ನೇ ಸಾಲಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಇವರ ಪತ್ರ ಸಂಖ್ಯೆ : ಸಿಎಲ್/ಸಿಆರ್/3/2010–11, ದಿನಾಂಕ : 27–9–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದ ಮೂಲಕ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ಪ್ರಕೃತಿ ವಿಕೋಪ ಹಾನಿ ಆಗಿರುವುದಕ್ಕೆ ಪರಿಹಾರ ಕಾರ್ಯ ಕೈಗೊಳ್ಳಲು ರೂ. 4.00 ಕೋಟಿ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 180 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ : 03–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರಿಗೆ ರೂ.50.00 (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಲಕ್ಷಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿಡಿ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–800–1–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿಯ ಸಂಖ್ಯೆ : ಆಇ/347/ವೆಚ್ಚ–7/2010, ದಿನಾಂಕ 25–9–2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಗಂಗಾಧರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ,
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2).

ಪಿ.ಆರ್. 2819

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎ.ಎಸ್. ರಾಮಚಂದ್ರಪ್ಪ, ಕೆ.ಎ.ಎಸ್. ಅಧಿಕಾರಿ, ಇವರಿಗೆ ತಹಶೀಲ್ದಾರರ ವೃಂದದಲ್ಲಿ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂ ಚಾಲಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1) ಅಧಿಕಾರಿಯ ಮನವಿ ದಿನಾಂಕ 02–07–2009.
2) ಮಹಾಲೇಖಪಾಲರ (ಎ & ಇ) ಇವರ ಪತ್ರ ಸಂ : ಜಿಇ–1/ಆರ್–2/ಗಿ೦ಟ–724/2009–10/413–14, ದಿನಾಂಕ 07–09–2009.
3) ಅಧಿಕೃತ ಜ್ಞಾಪನ ಸಂ : ಎಫ್‌ಡಿ 01 ಎಸ್‌ಆರ್‌ಸಿ 85, ದಿನಾಂಕ 22–01–85.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1) ರಲ್ಲಿ, ಪ್ರಸಕ್ತ ಕೆ.ಎ.ಎಸ್. ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎ.ಎಸ್.ರಾಮಚಂದ್ರಪ್ಪ, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ದಿನಾಂಕ 06–08–1976 ರಂದು ತಹಶೀಲ್ದಾರ್ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 13–08–1981 ರಂದು ಕೆ.ಎ.ಎಸ್. (ಕಿರಿಯ ಶ್ರೇಣಿ) ಹುದ್ದೆಗೆ ಬಡ್ತಿ ಹೊಂದಿದ್ದರೂ, ಅರ್ಹತಾ ದಿನಾಂಕವನ್ನು ದಿನಾಂಕ 10–01–1992 ರಂದು ನಿಗದಿಪಡಿಸಿದ್ದರಿಂದ ತಮಗೆ ತಹಶೀಲ್ದಾರರ ವೃಂದದಲ್ಲಿಯೇ ಸತತವಾಗಿ 15 ವರ್ಷಗಳಿಗೂ ಅಧಿಕ ಸೇವೆ ಸಲ್ಲಿಸಿರುವುದರಿಂದ ತಮಗೆ 10 ವರ್ಷದ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷದ ಸ್ವಯಂ ಚಾಲಿತ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದರು.

ಮೇಲೆ ಓದಲಾದ ಕ್ರ.ಸಂ. (2), ದಿನಾಂಕ 07–09–2009 ರಲ್ಲಿ ಮಹಾಲೇಖಪಾಲರ ವರದಿಯಂತೆ, ಸರ್ಕಾರವು ಸದರಿ ಕೆ.ಎ.ಎಸ್. ಅಧಿಕಾರಿಯ ಪ್ರಸ್ತಾವನೆಯನ್ನು ಮೇಲೆ ಓದಲಾದ ಕ್ರ.ಸಂ. (3) ರ ದಿನಾಂಕ : 22–01–1985 ಅಧಿಕೃತ ಜ್ಞಾಪನ, ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ ವೇತನ ಬಡ್ತಿ) ನಿಯಮಗಳ 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಪರಿಶೀಲಿಸಿ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 242 ಎಎಸ್‌ಡಿ 2008 (ಭಾಗ), ಬೆಂಗಳೂರು, ದಿನಾಂಕ : 29–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎ.ಎಸ್. ರಾಮಚಂದ್ರಪ್ಪ, ಕೆ.ಎ.ಎಸ್. ಅಧಿಕಾರಿ, ಪ್ರಸ್ತುತ ಎಸ್ಟೇಟ್ ಆಫೀಸರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಇವರಿಗೆ ಈ ಕೆಳಕಂಡಂತೆ, ತಹಶೀಲ್ದಾರ್ ವೃಂದದಲ್ಲಿ ಅವರ ಹೆಸರಿನ ಮುಂದೆ ಸೂಚಿಸಿದ ದಿನಾಂಕದಿಂದ ಜಾರಿಗೆ ಬರುವಂತೆ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಕರ್ನಾಟಕ ನಾಗರೀಕ ಸೇವಾ

(ಕಾಲಮಿತಿ, ವೇತನ ಬಡ್ತಿ) ನಿಯಮಗಳು 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಮಂಜೂರು ಮಾಡಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು-ಶ್ರೀ/ಶ್ರೀಮತಿ | ಕಾಲಮಿತಿ ವೇತನ ಬಡ್ತಿ ಮಂಜೂರಾತಿಯ ದಿನಾಂಕ | ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಮಂಜೂರಾತಿಯ ದಿನಾಂಕ |
|---|---|---|---|
| 1. | ಶ್ರೀ ಎ.ಎಸ್. ರಾಮಚಂದ್ರಪ್ಪ | 06-08-1986 | 06-08-1991 |

ಈ ಮೇಲಿನ ಅಧಿಕಾರಿಯು ಈ ಹಿಂದೆ ಕಾಲಮಿತಿ ವೇತನ ಬಡ್ತಿ ಸೌಲಭ್ಯಗಳನ್ನು ಪಡೆದಿದ್ದಲ್ಲಿ ಅದರಿಂದ ಲಭ್ಯವಾದ ಆರ್ಥಿಕ ಸೌಲಭ್ಯವು ಈ ಆದೇಶ ಹೊರಡಿಸಿದ ದಿನಾಂಕದಿಂದ ತಾನಾಗಿಯೇ ರದ್ದಾಗುತ್ತದೆ ಹಾಗೂ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ವಾಸ್ತವಿಕವಾಗಿ ಮುಂಬಡ್ತಿ ಪಡೆದ ದಿನಾಂಕದಿಂದ ಅದೇ ವೃಂದಕ್ಕೆ ಬಡ್ತಿಯು ಮುಂದೂಡಲ್ಪಟ್ಟು ನೀಡಲಾದ ಅರ್ಹ ದಿನಾಂಕದವರೆಗೆ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದದಲ್ಲಿ ಪಡೆದಿರುವ ಹೆಚ್ಚುವರಿ ವೇತನವನ್ನು ಕಟಾಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್. 2820

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 2010-11ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ ಲಾ 32 ಎಲ್‌ಸಿಎಲ್ 1982 ದಿನಾಂಕ 17/18-03-1983 ಮತ್ತು ತಿದ್ದುಪಡಿ ದಿನಾಂಕ : 30-10-1996ರ ಅಧಿಸೂಚನೆ ಸಂಖ್ಯೆ : ಲಾ 112 ಎಲ್‌ಸಿಎಲ್ 1996.
2) ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ ಲಾ 120 ಎಲ್‌ಸಿಎಲ್ 2007, ದಿನಾಂಕ 18-02-2008 ಮತ್ತು ಸೇರ್ಪಡೆ ದಿನಾಂಕ 16-05-2008.
3) ಅಧಿಸೂಚನೆ ಸಂಖ್ಯೆ : ಕಂಇ 59 ಭೂದಾಪು 2008 ದಿನಾಂಕ 26-12-2009.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ದಿ ಕರ್ನಾಟಕ ಗ್ರಾಂಟ್-ಇನ್-ಏಡ್-ಟು-ಬಾರ್- ಅಸೋಸಿಯೇಷನ್ ರೂಲ್ಸ್ 1983 ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ 17/18-03-1983 ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ ತಿದ್ದುಪಡಿ ತರಲಾಗಿದ್ದು, ದಿನಾಂಕ 30.10.1996 ರ ಅಧಿಸೂಚನೆಯಲ್ಲಿ ಆಯಾ ಜಿಲ್ಲೆಯ ಪ್ರಧಾನ/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಅಧಿಸೂಚನೆ ದಿನಾಂಕ 18-02-2008 ಮತ್ತು ಸೇರ್ಪಡೆ ದಿನಾಂಕ 16-05-2008 ರನ್ವಯ ಸಹಾಯಾನುದಾನದ ಮೊತ್ತವನ್ನು ಹೆಚ್ಚಿಸಿದ ಕರ್ನಾಟಕ ವಕೀಲರ ಸಂಘಗಳಿಗೆ ಸಹಾಯಾನುದಾನ (ತಿದ್ದುಪಡಿ) ನಿಯಮಗಳು, 2007 ದಿನಾಂಕ 18-02-2008 ರಿಂದ ಜಾರಿಗೆ ಬಂದಿದೆ. ಅದರಂತೆ ಹಣ ಬಿಡುಗಡೆಗಾಗಿ ರಾಜ್ಯದಲ್ಲಿನ ವಿವಿಧ ವಕೀಲರ ಸಂಘಗಳು ಸಹಾಯಾನುದಾನ ಬಿಡುಗಡೆಗಾಗಿ ಒತ್ತಾಯಿಸಿವೆ.

ಮೇಲೆ (3) ರಲ್ಲಿ ಓದಲಾದ ಅಧಿಸೂಚನೆ ದಿನಾಂಕ 26-12-2009 ರಲ್ಲಿ ಗುಲ್ಬರ್ಗಾ ಜಿಲ್ಲೆಯ ಸರಹದ್ದಿನಿಂದ ಯಾದಗಿರಿ, ಶೋರಾಪುರ, ಷಹಾಪುರ ತಾಲ್ಲೂಕುಗಳೊಂದಿಗೆ ವಿಭಜನೆಗೊಂಡು ದಿನಾಂಕ 30-12-2009 ರಿಂದ ಜಾರಿಗೆ ಬರುವಂತೆ ಹೊಸದಾಗಿ ಯಾದಗಿರಿ ಜಿಲ್ಲೆ ರಚನೆಯಾಗಿದ್ದು, ಅದರಂತೆ ಉಲ್ಲೇಖ (2)ರನ್ವಯ ಜಿಲ್ಲಾ ಮಟ್ಟಕ್ಕೆ ನಿಗದಿಪಡಿಸಲಾಗಿರುವ ಮೊತ್ತವನ್ನು ಯಾದಗಿರಿ ಜಿಲ್ಲೆಗೆ ಪರಿಗಣಿಸಿದೆ.

2010-11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2014-00 114-0-01-059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ರೂ.50.00 ಲಕ್ಷಗಳನ್ನು ಒದಗಿಸಿದೆ. ಅದರಲ್ಲಿ ರಾಜ್ಯದ ವಕೀಲರ ಸಂಘಗಳಿಗೆ ನಿಯಮಾನುಸಾರ ಸಹಾಯಾನುದಾನವನ್ನು ಅಡ್ವೋಕೇಟ್ ಜನರಲ್‌ರವರ ಮೂಲಕ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ತಿಳಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 137 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 04-11-2010**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ರಾಜ್ಯದಲ್ಲಿನ ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಗಳು 1983 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಒಟ್ಟು ರೂ. 41,70,000 (ರೂಪಾಯಿ ನಲವತ್ತೊಂದು ಲಕ್ಷದ ಎಪ್ಪತ್ತು ಸಾವಿರ ಮಾತ್ರ) ಮೊತ್ತದ ಸಹಾಯನುದಾನಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಎಲ್ಲಾ ವಿಭಾಗೀಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ಸಂಬಂಧಪಟ್ಟಂತೆ ಸಕ್ಷಮ ಪ್ರಾಧಿಕಾರಗಳು ಅಂದರೆ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ವಕೀಲರ ಸಂಘಗಳಿಂದ ವರದಿಯೊಂದಿಗೆ ಅರ್ಜಿಗಳನ್ನು ಪಡೆದು ಪರಿಶೀಲಿಸಿ ಈ ಕೆಳಗೆ ನಿಗದಿಪಡಿಸಲಾಗಿರುವಂತೆ ಮಂಜೂರು ಮಾಡಬಹುದು ಮತ್ತು ಆರ್ಥಿಕ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳ ಅನ್ವಯ ನಿಗದಿತ ಕಾಲಮಿತಿಯೊಳಗೆ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

* ತಾಲ್ಲೂಕು ಮಟ್ಟದ ವಕೀಲರ ಸಂಘ – ರೂ. 20,000/-

* ಜಿಲ್ಲಾ ಮಟ್ಟದ ವಕೀಲರ ಸಂಘ – ರೂ. 35,000/–
* ವಿಭಾಗೀಯ ಮಟ್ಟದ ವಕೀಲರ ಸಂಘ – ರೂ. 50,000/–
* ಬೆಂಗಳೂರು ವಕೀಲರ ಸಂಘ – ರೂ. 1,25,000/–

ಹಿಂದಿನ ಸಾಲಿನಲ್ಲಿ ಸಹಾಯಾನುದಾನ ಪಡೆದಿದ್ದಾಗ್ಯೂ ಸಹಾಯಾನುದಾನ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣಪತ್ರ ಪಡೆದು, ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು. ಆರ್ಥಿಕ ವರ್ಷ ಮುಗಿದ ಕೂಡಲೇ ಈ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರಿಗಳು ಬಿಡುಗಡೆ ಮಾಡಿದ ಮತ್ತು ಅದ್ಯರ್ಪಣೆ ಮಾಡಿದ ವಿವರಗಳನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸುವುದು.

ಈ ಸಹಾಯಾನುದಾನವನ್ನು ಅಡ್ವೋಕೇಟ್ ಜನರಲ್‌ರವರ ಮೂಲಕ ಲೆಕ್ಕ ಶೀರ್ಷಿಕೆ 2014–00–114–0–01–059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 423 ವೆಚ್ಚ–10/2010 ದಿನಾಂಕ 12.10.2010 ರಲ್ಲಿ ನೀಡಲಾಗಿರುವ ಸಹಮತಿಯನ್ವಯ ಹಾಗೂ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿರುವ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–07–1996ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ,(ಆಡಳಿತ–2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ : ಲಾ 137 ಎಲ್‌ಸಿಎಲ್ 2010, ದಿನಾಂಕ : 04–11–2010**

ರಾಜ್ಯದಲ್ಲಿನ ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2010–11 ನೇ ಸಾಲಿಗೆ ಬಿಡುಗಡೆ ಮಾಡಬೇಕಾದ ಅನುದಾನದ ವಿವರಗಳು.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆಗೊಳಿಸಬೇಕಾದ ಮೊತ್ತ |
|---|---|---|---|---|
| | | ಜಿಲ್ಲಾ ಮಟ್ಟದ ವಿಭಾಗ ವಕೀಲರ ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | ಬೆಂಗಳೂರು ನಗರ ವಕೀಲರ ಸಂಘ | – | 1 | 1,45,000–00 |
| 2 | ಬೆಂಗಳೂರು (ಗ್ರಾಮಾಂತರ) | – | 4 | 80,000–00 |
| 3 | ರಾಮನಗರ ಜಿಲ್ಲೆ | 1 | 3 | 95,000–00 |
| 4 | ಕೋಲಾರ | 1 | 6 | 1,55,000–00 |
| 5 | ಚಿಕ್ಕಬಳ್ಳಾಪುರ | 1 | 4 | 1,15,000–00 |
| 6 | ತುಮಕೂರು | 1 | 9 | 2,15,000–00 |
| 7 | ಮೈಸೂರು | 1 (ವಿ.ಮ) | 6 | 1,70,000–00 |
| 8 | ಚಾಮರಾಜನಗರ | 1 | 3 | 95,000–00 |
| 9 | ಮಂಡ್ಯ | 1 | 6 | 1,55,000–00 |
| 10 | ಹಾಸನ | 1 | 7 | 1,75,000–00 |
| 11 | ಶಿವಮೊಗ್ಗ | 1 | 6 | 1,55,000–00 |
| 12 | ಚಿಕ್ಕಮಗಳೂರು | 1 | 6 | 1,55,000–00 |
| 13 | ಚಿತ್ರದುರ್ಗ | 1 | 5 | 1,35,000–00 |
| 14 | ದಾವಣಗೆರೆ | 1 | 5 | 1,35,000–00 |
| 15 | ಬಳ್ಳಾರಿ | 1 | 6 | 1,55,000–00 |
| 16 | ಬೆಳಗಾಂ | 1 (ವಿ.ಮ) | 11 | 2,70,000–00 |
| 17 | ಬಿಜಾಪುರ | 1 | 4 | 1,15,000–00 |
| 18 | ಬಾಗಲಕೋಟೆ | 1 | 6 | 1,55,000–00 |
| 19 | ಧಾರವಾಡ | 1 | 3 | 95,000–00 |
| 20 | ಹಾವೇರಿ | 1 | 6 | 1,55,000–00 |
| 21 | ಗದಗ್ | 1 | 4 | 1,15,000–00 |
| 22 | ಉತ್ತರ ಕನ್ನಡ | 1 | 11 | 2,55,000–00 |
| 23 | ಬೀದರ್ | 1 | 4 | 1,15,000–00 |
| 24 | ಗುಲ್ಬರ್ಗ | 1 (ವಿ.ಮ) | 7 | 1,90,000–00 |
| 25 | ಯಾದಗಿರಿ | 1 | 2 | 75,000–00 |

| | | | | |
|---|---|---|---|---|
| 26 | ರಾಯಚೂರು | 1 | 4 | 1,15,000–00 |
| 27 | ಕೊಪ್ಪಳ | 1 | 3 | 95,000–00 |
| 28 | ದಕ್ಷಿಣ ಕನ್ನಡ | 1 | 5 | 1,35,000–00 |
| 29 | ಉಡುಪಿ | 1 | 2 | 75,000–00 |
| 30 | ಕೊಡಗು | 1 | 2 | 75,000–00 |
| | | ಒಟ್ಟು | | **41,70,000–00** |

**ಶಕುಂತಲ ಹೆಚ್.ಆರ್.**
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ
(ಆಡಳಿತ–2)

ಪಿ.ಆರ್. 2821

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ಕೋಲಾರ ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರದ ಮಂಜೂರಾತಿ ಕುರಿತು.

**ಓದಲಾಗಿದೆ** : 1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಬಿಡಿ–24/ಸಿಆರ್–05/2010, ಕೋಲಾರ, ದಿನಾಂಕ 02–09–2010.

2) ತನಿಖಾಧಿಕಾರಿಯ ಅಂತಿಮ ವರದಿ

3) ತನಿಖಾ ದಾಖಲೆಗಳಾದ ಮೆಮೋ ಆಫ್ ಎವಿಡೆನ್ಸ್ ಮತ್ತು ವಿವರ ಪ್ರಥಮ ವರ್ತಮಾನ ವರದಿ, ಫಿರ್ಯಾದುದಾರರ ದೂರು, ಪಂಚರ ಕೋರಿಕೆ ಪತ್ರಗಳು, ಪ್ರಾಯೋಗಿಕ ಮತ್ತು ರಿಕವರಿ ಮಹಜರ್‌ಗಳು ಹಾಗೂ ಮಾಲು ಪಟ್ಟಿಗಳು ಮತ್ತು ಆಪಾದಿತರ ಸಮಜಾಯಿಷಿ ಪತ್ರ, ನೋಟುಗಳ ಹೊಂದಾಣಿಕೆ ವಿವರ ಮತ್ತು ಸೀಲು ಸ್ವೀಕೃತಿ ಪತ್ರ ರಸಾಯನಿಕ ತಜ್ಞರ ಪರೀಕ್ಷಾ ವರದಿ, ಕೃತ್ಯ ನಡೆದ ಸ್ಥಳದ ನಕ್ಷೆ, ರಿಮ್ಯಾಂಡ್ ಅರ್ಜಿ, ಸಾಕ್ಷಿದಾರರ ಹೇಳಿಕೆಗಳು, ತನಿಖಾ ಕಾಲದಲ್ಲಿ ಅಮಾನತ್ತುಪಡಿಸಿಕೊಂಡ ದಾಖಲಾತಿಗಳು/ಠಾಣಾ ದಿನಚರಿ ಪ್ರತಿ, ತನಿಖಾ ಕಾಲದ ವಿವಿಧ ಹಂತಗಳಲ್ಲಿ ತೆಗೆಯಿಸಿದ ಫೋಟೋಗಳು.

***

**ಪ್ರಸ್ತಾವನೆ :**

ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ಕೋಲಾರ (ಹಾಲಿ ಅಮಾನತ್ತಿನಲ್ಲಿರುವ) ಇವರ ವಿರುದ್ಧ ಗುನ್ನೆ ಸಂಖ್ಯೆ: 05–2010 ದಿನಾಂಕ 11–05–2010ರಲ್ಲಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಕೋಲಾರ ಜಿಲ್ಲೆ, ಕೋಲಾರ ಇವರು ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರ ದಿನಾಂಕ 02–09–2010ರಲ್ಲಿ ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ಕೋಲಾರ ಇವರು ಗ್ರೂಪ್–'ಎ' ಹುದ್ದೆ ಹೊಂದಿರುವುದರಿಂದ ಇವರ ನೇಮಕಾತಿ ಪ್ರಾಧಿಕಾರವು ಸರ್ಕಾರವಾಗಿರುವುದರಿಂದ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ 19(1)(ಬಿ)ರ ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಫಿರ್ಯಾದುದಾರರಾದ ಶ್ರೀ ಕೆ. ರವಿ ಬಿನ್ ಕೃಷ್ಣಪ್ಪ, 38 ವರ್ಷ, ನಗರಸಭೆ ದಿನಗೂಲಿ ನೌಕರ, ವಾಸ: ಧರ್ಮರಾಯನಗರ, ಬಂಗಾರಪೇಟೆ ರಸ್ತೆ, ಕೋಲಾರ ಇವರ ಫಿರ್ಯಾದು ದಿನಾಂಕ 11–05–2010,
2) ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ, ಕೋಲಾರ ಪೋಲೀಸ್ ಠಾಣೆ ಪ್ರಕರಣ ಸಂಖ್ಯೆ: 05/2010.
3) ಪ್ರಾಯೋಗಿಕ ಪಂಚನಾಮೆ ದಿನಾಂಕ 11–5–2010
4) ಟ್ರ್ಯಾಪ್ ಮಹಜರ್ ದಿನಾಂಕ 11–05–2010
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಸಾ.ಆ.ಸಂ/ರಾ.ಪ/ಲೋಕ್/36/10–11, ದಿನಾಂಕ 15–06–2010.
6) ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ ವಿಭಾಗ, ಕೋಲಾರ ಇವರು ತಯಾರಿಸಿದ ಕೃತ್ಯ ನಡೆದ ಸ್ಥಳದ ನಕಾಶೆ ದಿನಾಂಕ 22–05–2010.
7) ಸಾಕ್ಷಿಗಳ ಹೇಳಿಕೆಗಳು:–
   i) ಶ್ರೀ ಕೆ. ರವಿ ಬಿನ್ ಕೃಷ್ಣಪ್ಪ, 38 ವರ್ಷ, ನಗರಸಭೆ ದಿನಗೂಲಿ ನೌಕರರ, ವಾಸ: ಧರ್ಮರಾಯ ನಗರ, ಬಂಗಾರಪೇಟೆ ರಸ್ತೆ, ಕೋಲಾರ.
   ii) ಶ್ರೀ ಹರಿಕೃಷ್ಣ ದಾನಂ, ಬಿನ್ ಲೇಟ್ ಡಿ. ವೆಂಕಟೇಶಪ್ಪ, 29 ವರ್ಷ, ದ್ವಿ.ದ.ಸ. ಜಿಲ್ಲಾ ಖಜಾನಾಧಿಕಾರಿಗಳ ಕಛೇರಿ, ಕೋಲಾರ.

iii) ಶ್ರೀ ಎನ್. ವೆಂಕಟೇಶ್ ಬಿನ್ ಲೇಟ್ ಕೆ. ನಾರಾಯಣಸ್ವಾಮಿ, ದ್ವಿ.ದ.ಸ. ಜಿಲ್ಲಾ ಖಜಾನಾಧಿಕಾರಿಗಳ ಕಛೇರಿ, ಕೋಲಾರ. ವಾಸ: 1ನೇ ಮುಖ್ಯ ರಸ್ತೆ, ಕುರುಬರಪೇಟೆ, ಕೋಲಾರ.

iv) ಶ್ರೀಮತಿ ಡಿ. ಸುಮಿತ್ರ ಕೋಂ ಲಕ್ಷ್ಮಣ 42 ವರ್ಷ, ಶಿಕ್ಷಕಿ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಾಸ್ತಿ, ವಾಸ: ಮಾಸ್ತಿ ಕಾಲೋನಿ, ಧರ್ಮರಾಯನಗರ, ಬಂಗಾರಪೇಟೆ ರಸ್ತೆ, ಕೋಲಾರ.

v) ಶ್ರೀ ವಿ. ಶಿವಕುಮಾರ್ ಬಿನ್ ಹೆಚ್. ಆರ್. ವೀರಶೆಟ್ಟಪ್ಪ, 59 ವರ್ಷ, ಆಯುಕ್ತರು, ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರ. ವಾಸ: ಎವರ್ ಗ್ರೀನ್ ಸ್ಕೂಲ್ ಮುಂಭಾಗ ಚಿಕ್ಕಬಳ್ಳಾಪುರ ರಸ್ತೆ, ವಿಜಯಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

vi) ಶ್ರೀ ಎನ್. ವೆಂಕಟಾಚಲಪತಿ, ಬಿನ್ ನಾರಾಯಣಪ್ಪ, 25 ವರ್ಷ ಜವಾನ (ಗುತ್ತಿಗೆ ಆಧಾರ) ನಗರಾಭಿವೃದ್ಧಿ ಪ್ರಾಧಿಕಾರ, ಆಯುಕ್ತರವರ ಕಛೇರಿ ಕೋಲಾರ. ವಾಸ: 3ನೇ ಕ್ರಾಸ್ ಕನಕನಪಾಳ್ಯ, ಕೋಲಾರ ಟೌನ್.

vii) ಶ್ರೀ ಮುಷ್ತಾಕ್ ಅಹಮದ್, ಜೆ.ಇ. ಲೋಕೋಪಯೋಗಿ ಇಲಾಖೆ, ಕೋಲಾರ ಉಪ ವಿಭಾಗ

viii) ಶ್ರೀ ಬಸವರಾಜ ಗೋವಿನಗಿಡದ್. ಸಹಾಯಕ ರಾಸಾಯನಿಕ ಪರೀಕ್ಷಾ ತಜ್ಞರು, ಬೆಂಗಳೂರು

ix) ಶ್ರೀ ಕೃಷ್ಣಪ್ಪ, ಹೆಚ್. ಸಿ.

x) ಶ್ರೀ ನರಸಿಂಹಯ್ಯ, ಪಿ.ಸಿ.

xi) ಶ್ರೀ ವಿಜಯಕುಮಾರ್, ಪಿ.ಸಿ.

xii) ಶ್ರೀ ಬಸವರಾಜ್, ಪಿ.ಸಿ.

xiii) ಶ್ರೀಮತಿ ಮಂಜುಳ, ಮ.ಪಿ.ಸಿ.

8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆ ಶ್ರೀಮತಿ ಸುಮಿತ್ರರವರು ತನ್ನ ನಿವೇಶನದ ಅಂತಿಮ ನಕ್ಷೆ ಕೋರಿ ಸಲ್ಲಿಸಿದ ಅರ್ಜಿ ಮತ್ತು ಇತರೆ ದಾಖಲಾತಿಗಳು

9) ಆಪಾದಿತರಾದ ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೋಲಾರ (ಹಾಲಿ ಅಮಾನತ್ತಿನಲ್ಲಿರುವ) ಇವರ ಸಮಜಾಯಿಷಿ ಹೇಳಿಕೆ ದಿನಾಂಕ 11–05–2010.

ತನಿಖಾಧಿಕಾರಿಗಳಾದ ಶ್ರೀ ಎಸ್. ಮಂಜುನಾಥ್, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಕೋಲಾರ ಜಿಲ್ಲೆ, ಕೋಲಾರ ಇವರು ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೋಲಾರ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಕೋಲಾರ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 05/2010ರಲ್ಲಿ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 7, 13(1)ಡಿ, ಜೊತೆಯಲ್ಲಿ 13(2)ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೋಲಾರ ಇವರು ಫಿರ್ಯಾದುದಾರರಾದ ಶ್ರೀ ಕೆ. ರವಿ ಬಿನ್ ಕೃಷ್ಣಪ್ಪ ಧರ್ಮರಾಯನಗರ, ಬಂಗಾರಪೇಟೆ ರಸ್ತೆ, ಕೋಲಾರ ಇವರು ತಮ್ಮ ದೊಡ್ಡಪ್ಪನ ಮಗಳಾದ ಶ್ರೀಮತಿ ಡಿ. ಸುಮಿತ್ರಾ, ಶಿಕ್ಷಕಿ ಇವರು ತಮ್ಮ ಬಡಾವಣೆಯಲ್ಲಿ ವಾಸಿಸುತ್ತಿದ್ದು ಅವರು ಸುಮಾರು 5 ವರ್ಷಗಳ ಹಿಂದೆ ಅವರ ತಂದೆ ದೊಡ್ಡ ಪಾಪಯ್ಯರವರಿಂದ ಸರ್ವೆ ನಂ. 97 ಪಿ–1ರಲ್ಲಿ 0–01 ಗುಂಟೆ ಜಮೀನನ್ನು ರೂ. 70,000/–ಗಳಿಗೆ ಖರೀದಿಸಿದ್ದು, ವಸತಿ ಉದ್ದೇಶಕ್ಕಾಗಿ ಮನೆ ಕಟ್ಟಲು ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರಿಂದ ಭೂ ಪರಿವರ್ತನೆ ಆದೇಶವಾಗಿದ್ದು, ಸದರಿ ನಿವೇಶನಕ್ಕೆ ನಗರಸಭೆಯಿಂದ ಖಾತೆಯು ಸಹ ಆಗಿರುತ್ತದೆ. ಶ್ರೀಮತಿ ಡಿ. ಸುಮಿತ್ರಾರವರು ಮನೆ ಕಟ್ಟಲು ಬ್ಯಾಂಕಿನಿಂದ ಸಾಲವನ್ನು ಪಡೆಯಲು ಅರ್ಜಿ ಸಲ್ಲಿಸಬೇಕಾಗಿರುವುದರಿಂದ ಸದರಿ ನಿವೇಶನದ ಅಂತಿಮಗೊಳಿಸಿದ ಕರಡು ನಕ್ಷೆ ಅವಶ್ಯಕತೆ ಇದ್ದುದರಿಂದ ಈ ಬಗ್ಗೆ ಸದರಿ ನಿವೇಶನದ ಅಂತಿಮಗೊಳಿಸಿದ ಕರಡು ನಕ್ಷೆ ಕೊಡಬೇಕೆಂದು ಸುಮಾರು ಒಂದು ವರ್ಷದ ಹಿಂದೆಯೇ ತನ್ನ ತಂಗಿಯವರು ಸಹಿ ಮಾಡಿದ ಅರ್ಜಿಯನ್ನು ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಕೋಲಾರ ರವರಿಗೆ ಕೊಟ್ಟಿದ್ದು, ಆದರೆ ಇದುವರೆವಿಗೂ ಸದರಿ ಕೆಲಸವನ್ನು ಮಾಡಿಕೊಟ್ಟಿರುವುದಿಲ್ಲ, ತನ್ನ ದೊಡ್ಡಪ್ಪನ ಮಗಳಾದ ಶ್ರೀಮತಿ ಡಿ. ಸುಮಿತ್ರಾರವರು ಸರ್ಕಾರಿ ಕೆಲಸದಲ್ಲಿರುವುದರಿಂದ ಸದರಿ ಕಛೇರಿಗೆ ಹೋಗಿ ಕೆಲಸ ಮಾಡಿಸಿಕೊಳ್ಳಲು ಸೌಕರ್ಯವಿಲ್ಲದಿದ್ದರಿಂದ ಕೆಲಸವನ್ನು ಮಾಡಿಸುವ ಜವಾಬ್ದಾರಿ ತನಗೆ ವಹಿಸಿದ್ದರಿಂದ ಈ ಬಗ್ಗೆ ಸುಮಾರು 15 ದಿನಗಳಿಂದ ತಾನು ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರಾದ ಶ್ರೀ ಎಂ. ಲಿಯಾಕತ್ ರವರನ್ನು ಭೇಟಿ ಮಾಡಿದಾಗ ರೂ. 3000/–ಗಳನ್ನು ಕೊಟ್ಟರೆ ನಿಮ್ಮ ಕೆಲಸ ಮಾಡಿಕೊಡುತ್ತೇನೆ, ಇಲ್ಲದಿದ್ದರೆ ಆಗುವುದಿಲ್ಲ ಅಂತ ತಿಳಿಸಿದರು. ನಂತರ ದಿನಾಂಕ 10–05–2010ರಂದು ಪುನಃ ಭೇಟಿಮಾಡಿದ್ದಾಗ ತನ್ನ ಕೆಲಸ ಮಾಡಿ ಕೊಡಲು ತನ್ನ ಹತ್ತಿರವಿದ್ದ ರೂ. 1000/–ಗಳನ್ನು ಕೇಳಿ ಪಡೆದುಕೊಂಡರು, ಆಗ ಸರ್ ನನ್ನ ಹತ್ತಿರ ಅಷ್ಟೊಂದು ಹಣ ಇರುವುದಿಲ್ಲ ಅಂದಾಗ ರೂ. 500/–ಗಳನ್ನು ಕಡಿಮೆ ಮಾಡಿ ಇನ್ನೂ ರೂ. 1500/–ಗಳನ್ನು ನಾಳೆ ತಂದು ಕೊಡು ಅಂತ ಲಂಚಕ್ಕೆ ಒತ್ತಾಯಿಸಿರುತ್ತಾರೆ.

ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 11–05–2010 ರಂದು ಕೋಲಾರದಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿದ್ದು, ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ಕೋಲಾರ ಇವರು ಅಕ್ರಮ ಸಂಭಾವನೆಯಾದ ರೂ. 1,500/–ಗಳನ್ನು ಕೋಲಾರ ಟೌನ್‌ನಲ್ಲಿನ ಕುವೆಂಪು ನಗರ 3ನೇ ಕ್ರಾಸ್‌ನಲ್ಲಿ ಬಾಡಿಗೆಗೆ ಪಡೆದಿರುವ ಖಾಸಗಿ ಕೊಠಡಿಯಲ್ಲಿ ನೆರಳು ಸಾಕ್ಷಿಯ ಸಮಕ್ಷಮ

ಫಿರ್ಯಾದುದಾರರಿಂದ ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 1,500/–ಗಳನ್ನು ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೋಲಾರ (ಹಾಲಿ ಅಮಾನತ್ತಿನಲ್ಲಿ) ಇವರ ಶರ್ಟಿನ ಜೇಬಿನಿಂದ ಕೋಲಾರದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಹೆಚ್ಚುವರಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತನಿಖಾ ವರದಿಯೊಂದಿಗೆ ಸರ್ಕಾರಕ್ಕೆ ಕಳುಹಿಸಲಾದ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ಫಿರ್ಯಾದುದಾರರಿಂದ ವಸತಿ ಉದ್ದೇಶಕ್ಕಾಗಿ ಮನೆ ಕಟ್ಟಲು ಪರಿವರ್ತನೆಯಾಗಿದ್ದ ಹಾಗೂ ನಗರಸಭೆಯಿಂದ ಖಾತೆಯೂ ಸಹ ಆಗಿದ್ದ ಕರಡು ನಕ್ಷೆ ಅನುಮೋದಿಸಲು ರೂ. 3,000/–ಗಳ ಬೇಡಿಕೆ ಇಟ್ಟು ರೂ. 1,000/– ಗಳನ್ನು ಕೇಳಿ ಪಡೆದು ರೂ. 1,500/–ಗಳನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಲುಕಿ ನಂತರ ಬಂಧನಕ್ಕೊಳಗಾಗಿರುವ ಅಂಶವನ್ನು ಸರ್ಕಾರವು ಗಮನಿಸಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ–1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಗಗೊಳಿಸಲು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ–1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ/ನೌಕರರಾದ ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೋಲಾರ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 99 ನಯೋಸೇ 2010, ಬೆಂಗಳೂರು, ದಿನಾಂಕ: 08–11–2010**

ಆರೋಪಿಯಾದ ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೋಲಾರ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಹುದ್ದೆಯಿಂದ ತೆಗೆದು ಹಾಕುವ/(ವಜಾಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಎಂ. ಲಿಯಾಕತ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೋಲಾರ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು, 1977ರ ನಿಯಮ 18 ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ಈ ದಿನ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 2828

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಶಿವಮೊಗ್ಗದಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಶಾಖೆಯನ್ನು ತೆರೆಯುವ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಸ್ ಜೆಐಸಿ&ಆರ್/ಸಿಬ್ಬಂದಿ/(1)/84/2010–11, ದಿನಾಂಕ 04–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ದಿನಾಂಕ 29–09–2010 ರಂದು ಶುಭಮಂಗಳ ಸೇವಾ ಟ್ರಸ್ಟ್ (ರಿ), ಶಿವಮೊಗ್ಗ ರವರ ಸಹಯೋಗದಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯು ನಡೆಸಿದ ಹೃದ್ರೋಗ ತಪಾಸಣಾ/ಚಿಕಿತ್ಸಾ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಪಾಲ್ಗೊಂಡಿದ್ದ ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆಸಿದ ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಅಭಿವೃದ್ಧಿ ಕೆಲಸ ಕಾರ್ಯಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ವಿವರವಾಗಿ ಚರ್ಚಿಸಿದಂತೆ ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಮಾಲೀಕತ್ವದ ಆಯುರ್ವೇದಿಕ್ ಆಸ್ಪತ್ರೆಯ (ಜಿಲ್ಲಾ ಸಾಂಕ್ರಾಮಿಕ ರೋಗಗಳ ಕಣ್ಗಾವಲು ಘಟಕ) ಕಟ್ಟಡದಲ್ಲಿ ಅಗತ್ಯವಾದ ಮಾರ್ಪಾಡು ಹಾಗೂ ಸೌಲಭ್ಯಗಳನ್ನು ಮಾಡಿಕೊಂಡು ಇನ್ನು 06 ತಿಂಗಳ

ಅವಧಿಯಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಶಾಖೆಯನ್ನು ಶಿವಮೊಗ್ಗದಲ್ಲಿ ತೆರೆಯಬೇಕೆಂದು ಮಾನ್ಯ ಮುಖ್ಯ ಮಂತ್ರಿಯವರು ಆದೇಶಿಸಿರುವ ಹಿನ್ನೆಲೆಯಲ್ಲಿ, ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಶಾಖೆಯನ್ನು ಶಿವಮೊಗ್ಗದಲ್ಲಿ ತೆರೆಯುವ ಬಗ್ಗೆ ಆದೇಶ ಹೊರಡಿಸುವಂತೆ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 225 ಪಿಟಿಡಿ 2009, ಬೆಂಗಳೂರು, ದಿನಾಂಕ: 30-10-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಮಾಲೀಕತ್ವದ ಆಯುರ್ವೇದಿಕ್ ಆಸ್ಪತ್ರೆಯ (ಜಿಲ್ಲಾ ಸಾಂಕ್ರಾಮಿಕ ರೋಗಗಳ ಕಣ್ಗಾವಲು ಘಟಕ) ಕಟ್ಟಡದಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಶಾಖೆಯನ್ನು ತೆರೆಯಲು ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1419 ವೆಚ್ಚ-5/2009, ದಿನಾಂಕ 04-12-2009 ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 1223 ಆಂಆಸ 2010, ದಿನಾಂಕ 21-10-2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಭೀಮಪ್ಪ**

ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. 2829 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ)

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಆಇ 145 ರಾಲೆಪ 2010 (3), ಬೆಂಗಳೂರು ದಿನಾಂಕ: 30-09-2010**

**ವಿಷಯ : ಶ್ರೀ ಎ. ಲೋಕೇಶ್, ಉಪ ನಿಯಂತ್ರಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರ ಹುದ್ದೆಗೆ ವಿಲೀನಗೊಳಿಸುವ ಬಗ್ಗೆ.**

ಮೇಲಿನ ವಿಷಯ ಕುರಿತು ಹೊರಡಿಸಿದ ಸರ್ಕಾರಿ ಆದೇಶ ಸಂಖ್ಯೆ : ಆಇ 208 ರಾಲೆಪ 2008, ದಿನಾಂಕ : 7-12-2009ರ ಆದೇಶ ಭಾಗದ ಎರಡನೇ ಕಂಡಿಕೆಯಲ್ಲಿನ ಪದಪುಂಜ "ಮೊದಲನೆ ಪರಂತುಕ" ಬದಲಾಗಿ "ಎರಡನೆ ಪರಂತುಕ" ವೆಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್ ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 205 ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಪ್ರೋತ್ಸಾಹ/ರಿಯಾಯಿತಿ ಉಪಯೋಗಿಸದೆ ಇರುವ ಕಂಪನಿಗೆ ಹೆಚ್ಚಿನ ಸಮಯಾವಕಾಶ ನೀಡುವ ಕುರಿತು.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ/303/ಸಿಎಸ್‌ಎಲ್/1999, ದಿನಾಂಕ : 07-01-2000.

**ಪ್ರಸ್ತಾವನೆ:-**

ಸರ್ಕಾರವು ರಾಜ್ಯದ ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಯನ್ನು ಉತ್ತೇಜಿಸಲು 1996-2001 ರವರೆಗಿನ ವಿವಿಧ ಕೈಗಾರಿಕಾ ನೀತಿಗಳಲ್ಲಿ ಕೈಗಾರಿಕಾ ಘಟಕಗಳಿಗೆ ಅವರ ಸ್ಥಿರಾಸ್ತಿ ಬಂಡವಾಳದ ಮೇಲೆ ಶೇಕಡವಾರು ಮಾರಾಟ ತೆರಿಗೆ/ಪ್ರವೇಶ ತೆರಿಗೆ ರಿಯಾಯಿತಿಯನ್ನು ನೀಡಿದೆ. ಆದರೆ ಮೌಲ್ಯಾಧಾರಿತ ತೆರಿಗೆ ಪದ್ಧತಿ ಜಾರಿಗೊಳ್ಳುವ ಹಂತದಲ್ಲಿ, ಮೇಲೆ ಓದಲಾದ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 303 ಸಿಎಸ್‌ಎಲ್ 99 ದಿನಾಂಕ : 07-01-2000 ರನ್ವಯ 1ನೇ ಜನವರಿ 2000 ದಿಂದ ಜಾರಿಗೆ ಬರುವಂತೆ ಎಲ್ಲಾ ಉತ್ತೇಜನೆಗಳನ್ನು ಹಿಂತೆಗೆದುಕೊಳ್ಳಲಾಯಿತು. 1ನೇ ಜನವರಿ 2000 ದಿಂದ ಸ್ಥಾಪಿತವಾದ ಘಟಕಗಳಿಗೆ ಯಾವುದೇ ಮಾರಾಟ ತೆರಿಗೆ ರಿಯಾಯಿತಿಗಳನ್ನು ನೀಡಿರುವುದಿಲ್ಲ.

2. ಹಲವು ದೊಡ್ಡ ಪ್ರಮಾಣದ ಕೈಗಾರಿಕೆಗಳು (Mega Projects) ಮಾರುಕಟ್ಟೆಯ ಅನಾನುಕೂಲತೆಗಳಿಂದ ಹಾಗೂ ಬಾಹ್ಯ ಕಾರಣಗಳಿಂದ ನೀತಿಯಡಿಯಲ್ಲಿ ಒದಗಿಸಿರುವ ಅರ್ಹ ಉತ್ತೇಜನ/ರಿಯಾಯಿತಿಗಳನ್ನು ನಿರ್ಧಿಷ್ಠ ಅವಧಿಯಲ್ಲಿ ಉಪಯೋಗಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ಹಾಗೂ ಈ ರಿಯಾಯಿತಿಗಳನ್ನು ಉಪಯೋಗಿಸಿಕೊಳ್ಳಲು ಕಾಲಾವಕಾಶ ನೀಡಬೇಕೆಂದು ಘಟಕಗಳು ಕೋರಿರುತ್ತವೆ. ಅಲ್ಲದೆ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದ್ದು ಅನಾನುಕೂಲಕರವಾದ ವಾತಾವರಣ ನಿರ್ಮಾಣವಾಗಿದ್ದು, ದೊಡ್ಡ ಪ್ರಮಾಣದ ಕೈಗಾರಿಕೆಗಳನ್ನು ಪ್ರಾರಂಭಿಸುವುದೇ ಕಷ್ಟಕರವಾಗಿದೆ. ಆದುದರಿಂದ, ರಾಜ್ಯ ಸರ್ಕಾರವು ಇಂತಹ ಪ್ರಕರಣಗಳಲ್ಲಿ ಉಪಯೋಗಿಸದೆ ಇರುವ ಅರ್ಹ ಉತ್ತೇಜನ/ರಿಯಾಯಿತಿಗಳನ್ನು ಉಪಯೋಗಿಸಿಕೊಳ್ಳಲು ಕೈಗಾರಿಕಾ ಘಟಕಗಳಿಗೆ ಕಾಲಾವಕಾಶ ನೀಡಲು ಪರಿಶೀಲಿಸಲಾಗಿದೆ. ಕೇಂದ್ರ ಸರ್ಕಾರವು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಮುಖಾಂತರ ಕಿರು ಮತ್ತು ಸಣ್ಣ ಕೈಗಾರಿಕೆಗಳ ರೀತಿಯಲ್ಲಿ ನೀಡಿರುವ ಸವಲತ್ತುಗಳ ರೀತಿಯಲ್ಲಿ ಈ ಸೌಲಭ್ಯವು ಸ್ವಲ್ಪ ಮಟ್ಟಿಗೆ ಭಾರಿ ಕೈಗಾರಿಕೆಗಳಿಗೆ ಪೂರಕವಾಗುವುವು ಎಂದು ಪರಿಗಣಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಹಿಂದೆ ನೀಡಿರುವ ಉತ್ತೇಜನಗಳನ್ನು ಉಪಯೋಗಿಸದೇ ಇರುವ ಕೈಗಾರಿಕೆಗಳಿಗೆ ಹೆಚ್ಚಿನ ಕಾಲಾವಕಾಶ ನೀಡಲು ಕೆಲವು ಷರತ್ತುಗಳನ್ನು ವಿಧಿಸಿ, ಹೆಚ್ಚಿಸಿದ ಕಾಲಾವಕಾಶವು ದುರುಪಯೋಗವಾದಂತೆ ಕ್ರಮ ಕೈಗೊಳ್ಳಲು ತೀರ್ಮಾನಿಸಲಾಗಿದೆ.

ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 408 ಎಸ್‌ಪಿಐ 2010 ಬೆಂಗಳೂರು ದಿನಾಂಕ : 01-12-2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮಂಜೂರು ಮಾಡಲ್ಪಟ್ಟ ತೆರಿಗೆ ಸಂಬಂಧಿತ ಅರ್ಹ ಉತ್ತೇಜನ ಮತ್ತು ರಿಯಾಯಿತಿಗಳನ್ನು ಉಪಯೋಗಿಸಿಕೊಳ್ಳದ ಘಟಕಗಳು ಅವುಗಳನ್ನು ಉಪಯೋಗಿಸಿಕೊಳ್ಳಲು ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಲಾಗಿದೆ.

1. ವಲಯ ನಿರ್ಧಿಷ್ಟ ಸಮಸ್ಯೆಗಳಿಂದಾಗಿ, ಮಾರಾಟ ತೆರಿಗೆ ಉತ್ತೇಜನ ರಿಯಾಯಿತಿಯ ಶೇ. 40 ರಷ್ಟು ಅರ್ಹತಾ ಮೊತ್ತವನ್ನು ಬಳಸಿಕೊಳ್ಳದಿರುವ ಭಾರಿ ಅಂದರೆ ರೂ. 250 ಕ್ಕಿಂತ ಹೆಚ್ಚಿನ ಬಂಡವಾಳ ಹೂಡಿರುವ ಘಟಕಗಳಿಗೆ ಮಾತ್ರ ಈ ಸೌಲಭ್ಯ ನೀಡಲಾಗುವುದು.

2. ಉತ್ತೇಜನ ರಿಯಾಯಿತಿ ಅವಧಿಯನ್ನು ಗರಿಷ್ಠ 2 ವರ್ಷಗಳವರೆಗೆ ಅಥವಾ ಶೇ. 50 ರಷ್ಟು ಅರ್ಹತಾ ಮೊತ್ತವನ್ನು ಬಳಸಿಕೊಳ್ಳುವ ಅವಧಿಯವರೆಗೆ (ಈಗಾಗಲೇ ಉತ್ತೇಜನ ರಿಯಾಯಿತಿಯನ್ನು ಬಳಸಿಕೊಂಡಿರುವುದೂ ಸೇರಿದಂತೆ), ಇವರೆಡರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ.
3. ಅವಧಿ ವಿಸ್ತರಣೆಯಿಂದಾಗಿ ಯಾವುದೇ ತೆರಿಗೆ ಮರುಪಾವತಿ ಇರುವುದಿಲ್ಲ. ಯಾವುದಾದರೂ ಹೆಚ್ಚಿಗೆ ತೆರಿಗೆ ಪಾವತಿಸಿದಲ್ಲಿ, ಅದನ್ನು ಮುಂದಿನ ತೆರಿಗೆ ಪಾವತಿಗೆ ಸರಿದೊಗಿಸಿಕೊಳ್ಳುವುದು.
4. ಅರ್ಹ ಘಟಕಗಳನ್ನು ರಾಜ್ಯ ಮಟ್ಟದ ಸಮನ್ವಯ ಸಮಿತಿಯು ಗುರುತಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 143 ಸಿಎಸ್ಎಲ್ 2010, ದಿನಾಂಕ : 20-02-2010 ಮತ್ತು ಸಚಿವ ಸಂಪುಟ ಟಿಪ್ಪಣಿ ಸಂಖ್ಯೆ : ಸಿ 563:2010 ರಲ್ಲಿ ನೀಡಿರುವ ಅನುಮೋದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2930

**ಎ.ವಿ.ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ** : 2010-11ನೇ ಸಾಲಿನಲ್ಲಿ ಸಹಕಾರ ಇಲಾಖೆಗೆ ಸಂಬಂಧಪಟ್ಟ ಮುಂದುವರೆದ ಯೋಜನೆಗಳನ್ನು ಅನುಷ್ಠಾನಗೊಳಿಸಿ ಲ್ಯಾಂಪ್ಸ್ ಮಹಾಮಂಡಳಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಆಡಳಿತ (3)/ಎಎಸ್‌ಪಿ/06/2010-11, ದಿನಾಂಕ 15-8-2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 15-8-2010ರ ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರ ಪ್ರಸ್ತಾವನೆಯಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾ ಮಂಡಳ ನಿ., ಮೈಸೂರು ರವರು ರಾಜ್ಯ ಯೋಜನೆಯಡಿಯಲ್ಲಿ 2010-11ನೇ ಸಾಲಿಗೆ ಲ್ಯಾಂಪ್ಸ್ ಮಹಾಮಂಡಳ ಮತ್ತು ಲ್ಯಾಂಪ್ಸ್ ಸಂಘಗಳಿಗೆ ಮಾರುಕಟ್ಟೆ ಮೂಲಕ ಸೌಕರ್ಯಗಳು ಸ್ಥಾಪನೆಯಾಗಿ 423 ಗಿರಿಜನ ಉಪಯೋಜನೆಯಡಿ ಲೆಕ್ಕ ಶೀರ್ಷಿಕೆ 2425-00-108-0-39 ಅಡಿಯಲ್ಲಿ ರೂ. 50-00 ಲಕ್ಷಗಳ ಆಯವ್ಯಯ ಅವಕಾಶವನ್ನು ಸರ್ಕಾರದ ಆದೇಶ ಸಂಖ್ಯೆ: ಸಇ 31 ಅಂಅಸ(ಎ)/2010 ದಿನಾಂಕ 1-4-2010ರಲ್ಲಿ ಕಲ್ಪಿಸಲಾಗಿದ್ದು, 2010-11ನೇ ಸಾಲಿಗೆ ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳಕ್ಕೆ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆಗೆ ಗಿರಿಜನ ಉಪಯೋಜನೆಯಡಿ ರೂ. 50-00 ಲಕ್ಷಗಳ ಅನುದಾನ ಕಲ್ಪಿಸಿದ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಲು ನಿರ್ದೇಶಿಸಲಾಗಿರುತ್ತದೆ.

ಈ ಬಗ್ಗೆ ಮಹಾಮಂಡಳದ ದಿನಾಂಕ 29-6-2010 ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಮಹಾಮಂಡಳಕ್ಕೆ ಮಾರುಕಟ್ಟೆ ಮೂಲಭೂತ ಸೌಕರ್ಯಕ್ಕಾಗಿ ರೂ. 6-00 ಲಕ್ಷ ಹಾಗೂ ವಾಹನ ಖರೀದಿಗೆ ಹೆಚ್ಚುವರಿ ಮೊತ್ತ ರೂ. 1.75 ಮಹೇಂದ್ರ ಬೊಲೇರೋ ಕ್ಯಾಂಪರ್ ಖರೀದಿಗೆ ಅನುದಾನ ಅವಶ್ಯಕತೆ ಇದ್ದು ಒಟ್ಟು ರೂ. 7.75 ಲಕ್ಷ ಆರ್ಥಿಕ ಸಹಾಯಧನವನ್ನು ಅನುದಾನವಾಗಿ ಮಹಾಮಂಡಳಕ್ಕೆ ಮಂಜೂರು ಮಾಡುವಂತೆ ಸರ್ಕಾರವನ್ನು ಸಹಕಾರ ಸಂಘಗಳ ನಿಬಂಧಕರ ಮೂಲಕ ಕೋರಲು ತೀರ್ಮಾನಿಸಲಾಗಿರುತ್ತದೆ.

ಇದಲ್ಲದೆ ಸದಸ್ಯ ಲ್ಯಾಂಪ್ಸ್ ಸಹಕಾರ ಸಂಘಗಳು ತಮ್ಮ ವ್ಯವಹಾರವನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ವೃದ್ಧಿಸಲು ಮಾರುಕಟ್ಟೆ ಮೂಲಭೂತ ಸೌಕರ್ಯಗಳ ಸ್ಥಾಪನೆಗೆ ಅನುದಾನವನ್ನು ಮಂಜೂರು ಮಾಡಬೇಕೆಂದು ಕೋರಿ 17 ಲ್ಯಾಂಪ್ಸ್ ಸಹಕಾರ ಸಂಘಗಳು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ದಿನಾಂಕ 29-6-2010ರ ಆಡಳಿತ ಮಂಡಳಿ ಸಭೆಯಲ್ಲಿ 2010-11ನೇ ಸಾಲಿನಲ್ಲಿ ಈ ಮಹಾಮಂಡಳಕ್ಕೆ ಗಿರಿಜನ ಉಪಯೋಜನೆಯಡಿಯಲ್ಲಿ ನಿಗದಿಪಡಿಸಿ ರೂ. 50-00 ಲಕ್ಷ ಅನುದಾನದಲ್ಲಿ ರೂ. 42.25 ಲಕ್ಷ ಅನುದಾನವನ್ನು 17 ಸದಸ್ಯ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮೂಲಭೂತ ಸೌಕರ್ಯದ ನಿರ್ಮಾಣದ ಬಗ್ಗೆ ಕೆಳಕಂಡಂತೆ ಮಂಜೂರು ಮಾಡಲು ನಿರ್ಣಯಿಸಿ ಶಿಫಾರಸ್ಸು ಮಾಡಿರುತ್ತಾರೆ.

| ಕ್ರ.ಸಂ. | ಸಂಘದ ಹೆಸರು | ಅನುದಾನದ ಉದ್ದೇಶ | ಅನುದಾನದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳ ನಿ., ಮೈಸೂರು | ಮೂಲಭೂತ ಸೌಕರ್ಯ, ವಾಹನ ಖರೀದಿಗೆ ಹೆಚ್ಚುವರಿ ಮೊತ್ತ | 6.00<br>1.75 |
| | | | 7.75 |
| 2 | ಬಿಳಿಗಿರಿರಂಗನ ಬೆಟ್ಟ ಲ್ಯಾಂಪ್ಸ್ ಸಹಕಾರ ಸಂಘ ನಿ., ಚಾಮರಾಜನಗರ | ಪೀಠೋಪಕರಣಗಳು | 1.00 |
| 3 | ಗುಂಡ್ಲುಪೇಟೆ ಲ್ಯಾಂಪ್ಸ್ ಸಹಕಾರ ಸಂಘ ನಿ., ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ | ಮಾರಾಟ ಮಳಿಗೆ, ಕಂಪ್ಯೂಟರ್ | 2.50<br>0.50 |
| | | | 4.00 |
| 4 | ಮೂಡಿಗೆರೆ ಲ್ಯಾಂಪ್ಸ್ ಸಹಕಾರ ಸಂಘ ನಿ., ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ | ಸಂಘದ ಆಡಳಿತ ಕಛೇರಿ, ತರಬೇತಿ ಭವನ | 3.00 |
| 5 | ಬಂಟ್ವಾಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ | ಸಂಘದ ವಿಟ್ಲ ಶಾಖೆ | 4.00 |
| 6 | ಕಾರ್ಕಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಕಾರ್ಕಳ, ದ.ಕ. ಜಿಲ್ಲೆ | ಮಾರಾಟ ಮಳಿಗೆ | 4.00 |
| 7 | ಕುಂದಾಪುರ ಲ್ಯಾಂಪ್ಸ್ ಸಹಕಾರ ಸಂಘ, ನಿ., ಕುಂದಾಪುರ, ಉಡುಪಿ ಜಿಲ್ಲೆ | ಮಾರಾಟ ಮಳಿಗೆ | 2.00 |
| 8 | ಪುತ್ತೂರು ಲ್ಯಾಂಪ್ಸ್ ಸಹಕಾರ ಸಂಘ, ಪುತ್ತೂರು, ದ.ಕ. ಜಿಲ್ಲೆ | ಮಾರಾಟ ಮಳಿಗೆ ಹಾಗೂ ಗೋದಾಮು | 3.00 |
| 9 | ಸುಳ್ಯ ಲ್ಯಾಂಪ್ಸ್ ಸಹಕಾರ ಸಂಘ ನಿ., ಸುಳ್ಯ, ದ.ಕ. ಜಿಲ್ಲೆ | ಮಾರಾಟ ಮಳಿಗೆ | 3.00 |

| | | | |
|---|---|---|---|
| 10 | ತಿತಿಮತಿ ಲ್ಯಾಂಪ್ಸ್ ಸಹಕಾರ ಸಂಘ ನಿ., ತಿತಿಮತಿ, ಕೊಡಗು ಜಿಲ್ಲೆ | ವ್ಯಾಪಾರ ಮಳಿಗೆಗಳು | 2.00 |
| 11 | ಯಲ್ಲಾಪುರ ಲ್ಯಾಂಪ್ಸ್ ಸಹಕಾರ ಸಂಘ ನಿ., ಉತ್ತರ ಕನ್ನಡ ಜಿಲ್ಲೆ | ಮೂಲಭೂತ ಸೌಕರ್ಯ | 1.50 |
| 12 | ಭಟ್ಕಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಉತ್ತರ ಕನ್ನಡ ಜಿಲ್ಲೆ | ಪೀಠೋಪಕರಣ, ವೆಹಿಕಲ್ ಶೆಡ್ | 1.00 |
| 13 | ಭಾಗಮಂಡಲ ಲ್ಯಾಂಪ್ಸ್ ಸಹಕಾರ ಸಂಘ ನಿ., ಕೊಡಗು ಜಿಲ್ಲೆ | ಜನರೇಟರ್ | 0.50 |
| 14 | ಕೊಪ್ಪ ಲ್ಯಾಂಪ್ಸ್ ಸಹಕಾರ ಸಂಘ ನಿ., ಚಿಕ್ಕಮಗಳೂರು ಜಿಲ್ಲೆ | ಜೇನು ಸಂಸ್ಕರಣಾ ಘಟಕ | 6.00 |
| 15 | ಮಂಗಳೂರು ಲ್ಯಾಂಪ್ಸ್ ಸಹಕಾರ ಸಂಘ ನಿ., ದಕ್ಷಿಣ ಕನ್ನಡ ಜಿಲ್ಲೆ | ಬ್ಯಾಂಕಿಂಗ್ ಕೌಂಟರ್ ಮತ್ತು ಲಾಕರ್ | 3.00 |
| 16 | ಹೆಚ್. ಡಿ. ಕೋಟೆ ಲ್ಯಾಂಪ್ಸ್ ಸಹಕಾರ ಸಂಘ ನಿ., ಮೈಸೂರು ಜಿಲ್ಲೆ | ಸ್ಟೀಲ್ ಡ್ರಂ, ಪೀಠೋಪಕರಣಗಳು, ವಿದ್ಯೂಥೀಕರಣ | 0.25<br>0.25<br>0.25 |
| | | | 0.75 |
| 17 | ಹುಣಸೂರು ಲ್ಯಾಂಪ್ಸ್ ಸಹಕಾರ ಸಂಘ ನಿ., ಮೈಸೂರು ಜಿಲ್ಲೆ | ದಾಸ್ತಾನು ಮಳಿಗೆ, ವ್ಯಾಪಾರ ಮಳಿಗೆ, ವಾಹನದ ಶೆಡ್ | 1.50<br>1.00<br>0.50 |
| | | | 3.00 |
| 18 | ಹಳಿಯಾಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಹಳಿಯಾಳ, ಉ.ಕ. ಜಿಲ್ಲೆ | ನಿವೇಶನದಲ್ಲಿ ಕಛೇರಿ, ಮಾರಾಟ ಮಳಿಗೆ, ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣಾಗಾರ | 1.50 |
| | | | **ಒಟ್ಟು 50.00** |
| | **(ರೂಪಾಯಿ ಐವತ್ತು ಲಕ್ಷಗಳು ಮಾತ್ರ)** | | |

2009–10ನೇ ಸಾಲಿನಲ್ಲಿ ಪುತ್ತೂರು ಲ್ಯಾಂಪ್ಸ್ ಸಹಕಾರ ಸಂಘಕ್ಕೆ ಕಿರು ಅರಣ್ಯ ಉತ್ಪನ್ನಗಳ ಮಾರಾಟ ಮಳಿಗೆಗಾಗಿ ರೂ. 4.00 ಲಕ್ಷ ಅನುದಾನ ಮಂಜೂರಾಗಿರುತ್ತದೆ. ಇದರಲ್ಲಿ ಪುತ್ತೂರು ಕಸಬಾ ಗ್ರಾಮದ ಸರ್ವೆ ನಂ. 298–2ಎ2 ರಲ್ಲಿ ವಿಸ್ತೀರ್ಣ 0.05 ಎಕರೆ ಸ್ಥಳದಲ್ಲಿ ಕಿರು ಅರಣ್ಯ ಉತ್ಪನ್ನಗಳ ಮಾರಾಟ ಮಳಿಗೆ ನಿರ್ಮಿಸಲಾಗಿರುತ್ತದೆ.

2010–11ನೇ ಸಾಲಿನಲ್ಲಿ ಮಾರಾಟ ಮಳಿಗೆ ಹಾಗೂ ಗೋದಾಮಿಗೆ ರೂ. 3.00 ಲಕ್ಷ ಅವಕಾಶ ಕಲ್ಪಿಸಿರುವುದು ಬಡಗನ್ನೂರು ಶಾಖೆಯಲ್ಲಿ ದಿನಸಿ ಮಾರಾಟ ಮಳಿಗೆ ಹಾಗು ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣಾ ಗೋದಾಮು ನಿರ್ಮಿಸಲು ಅನುದಾನವನ್ನು ಕೋರಲಾಗಿದೆ.

2009–10ನೇ ಸಾಲಿನಲ್ಲಿ ಸುಳ್ಯ ಲ್ಯಾಂಪ್ಸ್ ಸಹಕಾರ ಸಂಘಕ್ಕೆ ಕೇಂದ್ರ ಕಛೇರಿಯಲ್ಲಿ ಖಾಲಿ ಇರುವ ನಿವೇಶನದಲ್ಲಿ 2010–11ನೇ ಸಾಲಿನಲ್ಲಿ ಅಮರ ಷಡ್ನೂರು ಗ್ರಾಮದ ಚುಕ್ಕಾಡಿ ಶಾಖೆಯೂ ಈಗ ಸಣ್ಣ ಕಟ್ಟಡದಲ್ಲಿ ನಡೆಯುತ್ತಿರುವುದರಿಂದ ದೊಡ್ಡ ಪ್ರಮಾಣದಲ್ಲಿ ವ್ಯವಹಾರವನ್ನು ನಡೆಸಲು ಅನುಕೂಲವಾಗಲು ಕಟ್ಟಡವನ್ನು ನಿರ್ಮಾಣ ಮಾಡಲು ರೂ. 3.00 ಲಕ್ಷ ಅನುದಾನ ಕೋರಿರುವುದಾಗಿಯೂ ಸಹ ದಿನಾಂಕ 12–7–2010ರ ಪತ್ರದಲ್ಲಿ ತಿಳಿಸಿರುತ್ತಾರೆ.

2010–11ನೇ ಸಾಲಿಗೆ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಲೆಕ್ಕ ಶೀರ್ಷಿಕೆ 2425–00–108–0–39–425 ಗಿರಿಜನ ಉಪಯೋಜನೆಯಡಿ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆಗಾಗಿ ರೂ. 50–00 ಲಕ್ಷ ಅನುದಾನ ಮಂಜೂರು ಮಾಡಲು ಸರ್ಕಾರ ಅವಕಾಶ ಮಾಡಿಕೊಳ್ಳಲಾಗಿದೆ. ಈ ಅನುದಾನವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮ 2000 ಅನ್ನು ಪಾಲಿಸುವ ಷರತ್ತುಗಳಿಗೊಳಪಟ್ಟು ಮೇಲ್ಕಂಡಂತೆ ಲ್ಯಾಂಪ್ಸ್ ಮೂಲಕ 17 ಲ್ಯಾಂಪ್ಸ್ ಸಂಘಗಳಿಗೆ 42.25 ಲಕ್ಷಗಳನ್ನು ಬಿಡುಗಡೆ ಮಾಡಿದ ಅನುದಾನವನ್ನು ಲ್ಯಾಂಪ್ಸ್ ಮಹಾಮಂಡಳದ ಮೂಲಕ 17 ಲ್ಯಾಂಪ್ಸ್ ಸಂಘಗಳಿಗೆ 42.25 ಲಕ್ಷಗಳನ್ನು ಬಿಡುಗಡೆ ಮಾಡಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಮಹಾಮಂಡಳದಿಂದ ಸ್ವೀಕೃತಿಯನ್ನು ಪಡೆದು ಮೇಲು ರುಜು ಮಾಡಿ ಖಜಾನೆಯಿಂದ ಹಣವನ್ನು ಡ್ರಾ ಮಾಡಿ ಮಹಾಮಂಡಳಕ್ಕೆ ಪಾವತಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆರವರಿಗೆ ಅಧಿಕಾರ ನೀಡಲು ಕೋರಿರುತ್ತಾರೆ.

ಮೇಲೆ ವಿವರಿಸಿರುವಂತೆ, ಕರ್ನಾಟಕ ರಾಜ್ಯ ಲ್ಯಾಂಪ್ಸ್ ಮಹಾಮಂಡಳ, ಮೈಸೂರು ಇದಕ್ಕೆ ಮೂಲಭೂತ ಸೌಕರ್ಯಗಳಿಗಾಗಿ ರೂ. 7.75 ಲಕ್ಷಗಳನ್ನು 17 ಲ್ಯಾಂಪ್ಸ್ ಸಂಘಗಳಿಗೆ ರೂ. 42.25 ಲಕ್ಷ ಹೀಗೆ ಒಟ್ಟು ರೂ. 50–00 ಲಕ್ಷ ಅನುದಾನವನ್ನು 423 ಗಿರಿಜನ ಉಪಯೋಜನೆ ಲೆಕ್ಕ ಶೀರ್ಷಿಕೆ 2425–00–108–0–39 ರಡಿ ಮಂಜೂರು ಮಾಡಲು ಶಿಫಾರಸ್ಸು ಮಾಡಿ ಪೂರ್ಣ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 145 ಸಂಮಾಸ 2010, ಬೆಂಗಳೂರು, ದಿನಾಂಕ: 25–10–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಲ್ಯಾಂಪ್ಸ್ ಮಹಾ ಮಂಡಳ, ಮೈಸೂರು ಇದಕ್ಕೆ 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 2425–00–108–0–39–423 ಅಡಿಯಲ್ಲಿ ರೂ. 50.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಿದ್ದು, ಪ್ರತ್ಯಾಯೋಜಿತ ಅಧಿಕಾರಗಳನ್ವಯ ರೂ. 25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಸಹಕಾರ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಇ 70 ಆಂಆಸ 2010 ದಿನಾಂಕ 25–9–2010ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 2831

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಬಿಜಾಪುರ ತಾಲ್ಲೂಕಿನ ಹುಣಶ್ಯಾಳ ಗ್ರಾಮದ ಜಿನುಗು ಕೆರೆ ನಿರ್ಮಾಣ ಕಾಮಗಾರಿಗಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/3781, ದಿನಾಂಕ: 01/07/2010

**ಪ್ರಸ್ತಾವನೆ:**

ಬಿಜಾಪುರ ತಾಲ್ಲೂಕಿನ ಹುಣಶ್ಯಾಳ ಗ್ರಾಮದ ಜಿನುಗುಕೆರೆ ನಿರ್ಮಾಣಕ್ಕೆ ಅಗತ್ಯವಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡು ಪರಿಹಾರದ ಐತೀರ್ಪು ರಚಿಸಲು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಠೇವಣಿ ಮಾಡಲು ರೂ. 32,32,085–00ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 01/07/2010ರ ಪತ್ರದಲ್ಲಿ ಕೋರಿದ್ದಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 42 ಭೂಸ್ವಾಹಾ 2000, ದಿನಾಂಕ: 08/10/2001ರಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಆದುದರಿಂದ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 110 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 29–10–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಬಿಜಾಪುರ ತಾಲ್ಲೂಕಿನ ಹುಣಶ್ಯಾಳ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಭೂಸ್ವಾಧೀನ ಪ್ರಕ್ರಿಯೆಗಾಗಿ ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣ ಠೇವಣಿ ಮಾಡಲು ರೂ.32,32,085–00 ಗಳನ್ನು (ಮುವತ್ತೆರಡು ಲಕ್ಷದ ಮುವತ್ತೆರಡು ಸಾವಿರದ ಎಂಭತ್ತೈದು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಅನುಮೋದನೆ ನೀಡಿದೆ.

ಕಾಮಗಾರಿಗೆ ಅಗತ್ಯವಿರುವ ಭೂಸ್ವಾಧೀನದ ವಿಸ್ತೀರ್ಣದ ಬಗ್ಗೆ ದೃಢೀಕರಿಸಿಕೊಂಡು ಅದಕ್ಕನುಗುಣವಾಗಿ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡುವುದು

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ2010, ದಿನಾಂಕ: 20/10/2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಪಿ.ಆರ್ 2832

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಇಂಧನ ಸಚಿವಾಲಯ

**ವಿಷಯ** : ಮೆII ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ 18.9 ಮೆಗಾ ವ್ಯಾಟ್ ಸಾಮರ್ಥ್ಯದ ಹೊಂಗಡಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 24.00 ಮೆಗಾವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 392 ಎನ್‌ಸಿಇ 2006 ದಿನಾಂಕ: 17.3.2007
2) ಸರ್ಕಾರದ ಆದೇಶ ಸಂಖ್ಯೆ: ಇಎನ್ 299 ಎನ್‌ಸಿಇ 2007 ದಿನಾಂಕ: 04.09.2007
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ ಹೊಂಗಡದಹಳ್ಳ ಎಂಹೆಚ್ ಎಸ್/2010/2318 ದಿನಾಂಕ: 03/05.08.2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆII ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಎಡಕುಮೇರಿ ಗ್ರಾಮದ ಬಳಿ ಕೆಂಪುಹೊಳೆಯ ಉಪ ನದಿಯಾದ ಹೊಂಗಡಹಳ್ಳ (ಹೊಂಗಡ್ಡಹಳ್ಳ ಆಸುಪಾಸಿನಲ್ಲಿ ) ನದಿಗೆ ಅಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಂಗಡಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಮೆIIಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿದ್ದ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಂಗಡಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 18.9 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಯೋಜನಾಸ್ಥಳದಲ್ಲಿ ಹೆಡ್ ಹಾಗೂ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಮೂರು ಘಟಕಗಳನ್ನು ಸ್ಥಾಪಿಸಲು ನೀರಿನ ಲಭ್ಯತೆ ಇರುವ ಹಿನ್ನೆಲೆಯಲ್ಲಿ 18.9 ಮೆಗಾ ವ್ಯಾಟ್ ಸಾಮರ್ಥ್ಯದ ಹೊಂಗಡಹಳ್ಳ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 24.00 ಮೆಗಾ ವ್ಯಾಟ್‌ಗೆ ಕೆಲವೊಂದು ಹೆಚ್ಚುವರಿ ಷರತ್ತಿನೊಂದಿಗೆ ಹೆಚ್ಚಿಸಲು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 355 ಎನ್‌ಸಿಇ 2010, ಬೆಂಗಳೂರು ದಿನಾಂಕ: 19.10.2010.**

ಸರ್ಕಾರವು ಮೆII ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಎಡಕುಮೇರಿ ಗ್ರಾಮದ ಬಳಿ ಕೆಂಪುಹೊಳೆಯ ಉಪ ನದಿಯಾದ ಹೊಂಗಡಹಳ್ಳ (ಹೊಂಗಡಹಳ್ಳ ಆಸು ಪಾಸಿನಲ್ಲಿ) ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ 18.9 ಮೆಗಾ ವ್ಯಾಟ್‌ಗೆ ಸಾಮರ್ಥ್ಯದ ಹೊಂಗಡಹಳ್ಳ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 24.00 ಮೆಗಾ ವ್ಯಾಟ್

ಹೆಚ್ಚಿಸಲು ಮೇಲೆ ಓದಲಾದ (1)ರ ಮೂಲ ಹಂಚಿಕೆ ಆದೇಶದ ಇತರ ನಿಬಂಧನೆಗಳೊಂದಿಗೆ ಈ ಕೆಳಗಿನ ಹೆಚ್ಚುವರಿ ನಿಬಂಧನೆಗಳನ್ನು ಅಳವಡಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ:–

1. One more small Hydro project has been allotted to M/s Maruthi power Gen (India) Pvt. Limited at the same location on the right bank of Hongadahalla stream vide Government Order No: EN 277 NCE 2007 dated:5.10.2007 (4 MW) and capacity enhanced from 4 MW to 19 MW vide Government Order No: EN 277 NCE 2007 dated: 29.11.2007.These two project should be treated as separate project and not be clubbed. Separate power houses, switch yard etc. are to be set up.
2. No further government land including forest land will be made available.

ಈ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 2833

**ಸುರೇಶ್.ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಗುಲ್ಬರ್ಗಾ ಜಿಲ್ಲೆಯ ಸೇಡಂ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 2200.00 ಲಕ್ಷಗಳಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಒಳಚರಂಡಿ ಮಂಡಳಿರವರ ಪತ್ರ ಸಂಖ್ಯೆ: ಕಜಮಂ/ಎಂಡಿ/ಸಿಇ(ಎನ್)/ಎಸ್‌ಜಿ ಇಇ(ಜಿ)/ಡಿಸಿಇ–2/ಟಿಎ–1/ಎಇ–3/1902/2010–11, ದಿನಾಂಕ:24/9/2010.

**ಪ್ರಸ್ತಾವನೆ:**

ಸೇಡಂ ಪಟ್ಟಣವು ಗುಲ್ಬರ್ಗಾ ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯಂತೆ 31,539 ಇದ್ದು ಪ್ರಸ್ತುತ 38,000 ಇರುತ್ತದೆ. ಸೇಡಂ ಪಟ್ಟಣಕ್ಕೆ ಕಾಗಿನ ನದಿ ಮೂಲದಿಂದ ನೀರು ಸರಬರಾಜು ವ್ಯವಸ್ಥೆಯನ್ನು ಒದಗಿಸಿ 1996ರಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯನ್ನು ಸುಧಾರಿಸಲು ರೂ.911.00 ಲಕ್ಷಗಳ ವೆಚ್ಚದಲ್ಲಿ ಯೋಜನೆಯ ಮಧ್ಯಂತರ ಅವಧಿ 2021ಕ್ಕೆ ಅಂದಾಜಿಸಲಾದ 46,850 ಮತ್ತು ಅಂತಿಮ ಅವಧಿ 2036ಕ್ಕೆ ಅಂದಾಜಿಸಲಾದ 63,055 ಜನಸಂಖ್ಯೆಗೆ ತಲಾ ದಿನಂ ಪ್ರತಿ 100 ಲೀಟರ್‌ನಂತೆ ನೀರು ಸರಬರಾಜು ಮಾಡಲು ಯೋಜಿಸಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಹಾಗೂ ಕಾಮಗಾರಿಯು ಪ್ರಗತಿಯಲ್ಲಿದೆ. ಸದರಿ ಯೋಜನೆಯ ಅನುಷ್ಠಾನದ ನಂತರ ಪಟ್ಟಣದಲ್ಲಿ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲು ಸಾಧ್ಯವಾಗುತ್ತದೆ.

2. ಸೇಡಂ ಪಟ್ಟಣದಲ್ಲಿ ಸದ್ಯಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ತ್ಯಾಜ್ಯ ನೀರನ್ನು ತೆರೆದ ಚರಂಡಿಗಳಿಗೆ ಬಿಡುತ್ತಿರುವುದರಿಂದ, ನಾಗರೀಕರ ಆರೋಗ್ಯದ ಮೇಲೆ ವಿಪರೀತ ಪರಿಣಾಮ ಉಂಟಾಗುತ್ತಿದ್ದು, ಪಟ್ಟಣದಲ್ಲಿ ಒಳಚರಂಡಿ ಯೋಜನೆಯನ್ನು 2030ರ ಮಧ್ಯಂತರ ಅವಧಿಗೆ ನಿರೀಕ್ಷಿಸಲಾದ 61,868 ಹಾಗೂ 2045ರ ಅಂತಿಮ ಅವಧಿಗೆ ನಿರೀಕ್ಷಿಸಲಾದ 83,881 ಜನಸಂಖ್ಯೆಗೆ ಅಂದಾಜಿಸಿ, ಗ್ರಾಮಸಾರವನ್ನು ಪರಿಗಣಿಸಿ, ಒಳಚರಂಡಿ ಯೋಜನೆಯನ್ನು ವಿನ್ಯಾಸಿಸಲಾಗಿದೆ.

3. ಸದರಿ ಯೋಜನೆಯ ಅಂದಾಜು ಪ್ರತಿಯನ್ನು 2010–11ನೇ ಸಾಲಿನ ಮಂಡಳಿಯ ಹಾಗೂ ಲೋಕೋಪಯೋಗಿ ಇಲಾಖೆಯ ದರಪಟ್ಟಿ ಆಧರಿಸಿ ರೂ.2200.00 ಲಕ್ಷಗಳಿಗೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ ರವರು ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕನಾಟಕ ಸರ್ಕಾರದ ಸಾಲ (ಶೇ.30%) | ರೂ. 660.00 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.50%) | ರೂ. 1100.00 ಲಕ್ಷಗಳು |
| **ಸ್ಥಳೀಯ ಸಂಸ್ಥೆಯ ವಂತಿಕೆ (20%)** | ರೂ. 440.00 ಲಕ್ಷಗಳು |
| **ಒಟ್ಟು** | **ರೂ. 2200.00 ಲಕ್ಷಗಳು** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 06 ಯುಡಿಎಸ್ 2010 ಬೆಂಗಳೂರು ದಿನಾಂಕ 02–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ **ಸೇಡಂ ಪಟ್ಟಣಕ್ಕೆ ಒಳಚರಂಡಿ** ವ್ಯವಸ್ಥೆಯನ್ನು ಅಂದಾಜು ರೂ. 2200.00 ಲಕ್ಷಗಳಲ್ಲಿ ಮಾತ್ರ (ರೂ.ಎರಡು ಸಾವಿರದ ಇನ್ನೂರು ಲಕ್ಷಗಳಲ್ಲಿ ಮಾತ್ರ) **ನಗರ ನೀರು ಸರಬರಾಜು** ಯೋಜನೆಯಡಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಈ ಕೆಳಕಂಡ ಷರತ್ತುಗಳನ್ವಯ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) ETP, Tender premium, escalation charges to be kept within 5% and the estimate to be reduced to that extent;

2) UGD rates as proposed by KUWS & DB to be implemented to meet the O&M Charges;

3) KTPP provisions, quality control and timely completion to be ensured;

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ/656/ಇಎಕ್ಸ್‌ಪಿ–9/2010, ದಿನಾಂಕ: 24/9/2010ರಲ್ಲಿ ನೀಡಿದ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ.ಹಿರೇಮಠ**

ಪಿ.ಆರ್ 2834

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು, ಸಿ.ಎಸ್.ಪುರ ಕೆರೆಯ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯ ಟೆಂಡರ್ ಕುರಿತು

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ; ಸನೀಇ 26 ಕೆಜಿದು 2010(2) ದಿನಾಂಕ 19.05.2010.
2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸ(ದ)/ತಾಂಸ.1/ಸಇಂ.6/ತುಮಕೂರು/ಇಂ.ನಂ.1256/ ಟೆಂಡರ್/2010/3074 ದಿನಾಂಕ 25.10.2010.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 30.10.2010ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ಟೆಂಡರ್/08-09/3172

**ಪ್ರಸ್ತಾವನೆ:**

ಆರ್.ಆರ್.ಆರ್ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು, ಸಿ.ಎಸ್.ಪುರ ಕೆರೆಯ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯು ಸೇರಿದ್ದು, ಈ ಕಾಮಗಾರಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ 259.00 ಲಕ್ಷ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ಹಾಗೂ ಮುಖ್ಯ ಇಂಜಿನಿಯರ್ ಇವರ ಸಿ.ಇ.ಆರ್ ಸಂಖ್ಯೆ: 79/2010-11ರಲ್ಲಿ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ತುಮಕೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ- ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 21.08.2010 |
| ತುಮಕೂರು ಜಿಲ್ಲಾ ಟೆಂಡರ್ ಬುಲೆಟಿನ್ | 20.08.2010 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್, ಕನ್ನಡಪ್ರಭ, ಡೆಕ್ಕನ್ ಹೆರಾಲ್ಡ್ ಹಾಗೂ ಪ್ರಜಾವಾಣಿ ದಿನ ಪತ್ರಿಕೆ | 22.08.2010 ಹಾಗೂ 23.8.2010 |

ದಿನಾಂಕ 31.08.2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ 4 ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು 4.10.2010ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.2,01,62,341/- |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ /ಕಡಿಮೆ |
|---|---|---|---|
| 1 | ನಿರ್ಮಾಣ್ ಎಂಜಿನಿಯರ್ಸ್ ಅಂಡ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರು. | 213,96,494/- | 6.121 ಹೆಚ್ಚು |

ಮೇಲ್ಕಂಡಂತೆ ಮೆ.ನಿರ್ಮಾಣ್ ಎಂಜಿನಿಯರ್ಸ್ ಅಂಡ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.121 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 29/10/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,01,62,341/-ಗಳ ಮೇಲೆ ಶೇ.6.121 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,13,96,494/- ಗಳಿಗೆ ಕಾಮಗಾರಿಯನ್ನು ಮೆ. ನಿರ್ಮಾಣ್ ಎಂಜಿನಿಯರ್ಸ್ ಅಂಡ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 83 ಕೆಜಿದು 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು, ಸಿ.ಎಸ್.ಪುರ ಕೆರೆಯ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,01,62,341/- ಗಳ ಮೇಲೆ ಶೇ. 6.121 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,13,96,494/-ಗಳಿಗೆ (ರೂ ಎರಡು ಕೋಟಿ ಹದಿಮೂರು ಲಕ್ಷ ತೊಂಬತ್ತಾರು ಸಾವಿರದ ನಾಲ್ಕುನೂರ ತೊಂಬತ್ತನಾಲ್ಕು) ಕಾಮಗಾರಿಯನ್ನು ಮೆ. ನಿರ್ಮಾಣ್ ಎಂಜಿನಿಯರ್ಸ್, ಅಂಡ್ ಕಾಂಟ್ರಾಕ್ಟರ್ಸ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

ಪಿ.ಆರ್ 2835

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ಅರಸೀಕೆರೆ ದೊಡ್ಡ ಕೆರೆ ಮತ್ತು ಇತರ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಗಳ(ಪ್ಯಾಕೇಜ್–15)ಟೆಂಡರ್ ಕುರಿತು.

**ಓದಲಾಗಿದೆ:**
1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ) ತಾಂ.2/ಸಇಂ.2/ಹಾಸನ/ಆರ್.ಆರ್.ಆರ್‌ಇ–ಟೆಂಡರ್/2010/2991 ದಿನಾಂಕ 18.10.2010.
2) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 30.10.2010ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ಟೆಂಡರ್/08–09/3172

**ಪ್ರಸ್ತಾವನೆ:**

ಆರ್.ಆರ್.ಆರ್ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕಿನ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಮಂಜೂರಾದ ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ಸಂಖ್ಯೆ |
|---|---|---|---|
| ಅರಸೀಕೆರೆ ತಾಲ್ಲೂಕಿನ ಅರಸೀಕೆರೆ ದೊಡ್ಡಕೆರೆ | ರೂ 61.00 ಲಕ್ಷ | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು | ಸಿ.ಇ.ಆರ್ ಸಂಖ್ಯೆ: 29/2010–11 |
| ಅರಸೀಕೆರೆ ತಾಲ್ಲೂಕಿನ ಹಾರನಹಳ್ಳಿ ಕೆರೆ | ರೂ 48.50 ಲಕ್ಷ | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಮೈಸೂರು | ಸಿ.ಆರ್ ಸಂಖ್ಯೆ: 14/2010–11 |
| ಅರಸೀಕೆರೆ ತಾಲ್ಲೂಕಿನ ಕಣಕಟ್ಟೆ ಕೆರೆ | ರೂ 45.00 ಲಕ್ಷ | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಮೈಸೂರು | ಸಿ.ಆರ್ ಸಂಖ್ಯೆ: 13/2010–11 |
| ಅರಸೀಕೆರೆ ತಾಲ್ಲೂಕಿನ ಕೊಳಗುಂದ ಕೆರೆ | ರೂ. 30.00 ಲಕ್ಷ | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಮೈಸೂರು | ಸಿ.ಆರ್ ಸಂಖ್ಯೆ: 6/2010–11 |
| ಅರಸೀಕೆರೆ ತಾಲ್ಲೂಕಿನ ಬೆಂಡೆಕೆರೆ | ರೂ. 29.00 ಲಕ್ಷ | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಮೈಸೂರು | ಸಿ.ಆರ್ ಸಂಖ್ಯೆ: 4/2010–11 |

ಈ ಕಾಮಗಾರಿಗಳ ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ– ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 07.07.2010 |
| ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 03.07.2010 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್, ವಿಜಯ ಕರ್ನಾಟಕ ಹಾಗೂ ಪ್ರಜಾವಾಣಿ ದಿನ ಪತ್ರಿಕೆ | 08.07.2010 |

ಅನಿವಾರ್ಯ ಕಾರಣಗಳಿಂದ ಮುಂದೂಡಿಕೆ ಟೆಂಡರ್ ಪ್ರಕಟಣೆ ಹೊರಡಿಸಲಾಗಿದೆ.

ದಿನಾಂಕ 20.08.2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಕೇವಲ ಒಬ್ಬ ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರ ಟೆಂಡರ್ ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು 30.09.2010ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,62,20,213/– |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ /ಕಡಿಮೆ |
|---|---|---|---|
| 1 | ಸಿ.ಹೆಚ್.ವಿ.ಎನ್ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು. | 1,71,63,492/– | 5.815 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಿ.ಹೆಚ್.ವಿ.ಎನ್ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.815 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 29/10/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮೂಲ ಟೆಂಡರನ್ನು ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,62,20,213/–ಗಳ ಮೇಲೆ ಶೇ.5.815 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,71,63,492/– ಗಳಿಗೆ ಕಾಮಗಾರಿಯನ್ನು ಶ್ರೀ ಸಿ.ಹೆಚ್.ವಿ.ಎನ್.ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 85 ಕೆಜಿದು 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ಅರಸೀಕೆರೆ ದೊಡ್ಡ ಕೆರೆ ಮತ್ತು ಇತರ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,62,20,213/– ಗಳ ಮೇಲೆ ಶೇ.5.815 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,71,63,492/– ಗಳಿಗೆ(ರೂ ಒಂದು ಕೋಟಿ ಎಪ್ಪತ್ತೊಂದು ಲಕ್ಷ ಅರವತ್ತಮೂರು ಸಾವಿರದ ನಾಲ್ಕು ನೂರ ತೊಂಬತ್ತೆರಡು) ಕಾಮಗಾರಿಯನ್ನು ಶ್ರೀ ಸಿ.ಹೆಚ್.ವಿ ಎನ್ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪಿ.ಆರ್ 2836

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಸಂಕೀರ್ಣ ಮತ್ತು ಸಮ್ಮೇಳನಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 35 ಅಡವಿ 2010. ದಿನಾಂಕ 15–04–10.

(2) ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರ ಪತ್ರ ಸಂಖ್ಯೆ:ಕರಾದೂಸಂಅಕೇಂ/67/ಜಿಇಎನ್/2010 ದಿನಾಂಕ: 04–11–2010.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2—08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ. 350.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 350.00 ಲಕ್ಷಗಳ ಒದಗಣೆ ಮೊತ್ತದಲ್ಲಿ ಸಂಕೀರ್ಣ ಮತ್ತು ಸಮ್ಮೇಳನಕ್ಕಾಗಿ ರೂ. 20.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ 04–11–2010ರ ಪತ್ರದಲ್ಲಿ ಸಮ್ಮೇಳನ ಮತ್ತು ಸಂಕೀರ್ಣಗಳಿಗೆ ಈವರೆವಿಗೆ ರೂ. 13,78,630/–ಗಳನ್ನು ವೆಚ್ಚ ಮಾಡಿರುವುದಾಗಿಯು ಹಾಗೂ ನವೆಂಬರ್ ಮಾಹೆಯ ಅಂತ್ಯದಲ್ಲಿ ಆಯೋಜಿಸಿರುವ ಸಮ್ಮೇಳನಕ್ಕೆ ರೂ. 5.00 ಲಕ್ಷಗಳು ಬೇಕಾಗಿರುವುದಾಗಿಯು ತಿಳಿಸುತ್ತಾ ಒಟ್ಟು ರೂ. 20.00 ಲಕ್ಷಗಳನ್ನು ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಸಂಕೀರ್ಣ ಮತ್ತು ಸಮ್ಮೇಳನಕ್ಕಾಗಿ ಒದಗಿಸಲಾಗಿರುವ ರೂ. 20.00 ಲಕ್ಷಗಳನ್ನು ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 57 ಎಡಿಎಂ 2010 ಬೆಂಗಳೂರು, ದಿನಾಂಕ 18–11–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಸಂಕೀರ್ಣ ಮತ್ತು ಸಮ್ಮೇಳನಕ್ಕಾಗಿ ಒದಗಿಸಲಾಗಿರುವ ರೂ. 20.00 ಲಕ್ಷಗಳ (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ –059 ಇತರೆ ಖರ್ಚು [ಯೋಜನೆ]"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.05.08ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2837

**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಮಾದರಿ ಸಾರ್ವಜನಿಕ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಕಇ 133 ಪಕವಿ 2010, ದಿನಾಂಕ 29–06–2010.

**ಪ್ರಸ್ತಾವನೆ :**

2010–11ನೇ ಸಾಲಿಗೆ ರಾಜ್ಯದ 10 ಜಿಲ್ಲೆಗಳಲ್ಲಿ ತಲಾ ಒಂದೊಂದು ಮಾದರಿ ಸಾರ್ವಜನಿಕ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲು ಮೇಲೆ ಓದಲಾದ ಆದೇಶದಲ್ಲಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ರಾಜ್ಯದಲ್ಲಿ ಅಂತಹ ಇನ್ನೂ ಒಂದು ವಿದ್ಯಾರ್ಥಿನಿಲಯ ಸ್ಥಾಪಿಸಬೇಕೆಂಬ ಪ್ರಸ್ತಾವನೆ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 133 ಪಕವಿ 2010 ಬೆಂಗಳೂರು, ದಿನಾಂಕ 12–11–2010**

ಶಿವಮೊಗ್ಗ ನಗರದಲ್ಲಿ 100 ವಿದ್ಯಾರ್ಥಿಗಳ ಸಂಖ್ಯಾಬಲವುಳ್ಳ ಒಂದು ಮೆಟ್ರಿಕ್ ನಂತರದ ಬಾಲಕರ ಮಾದರಿ ಸಾರ್ವಜನಿಕ ವಿದ್ಯಾರ್ಥಿನಿಲಯ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಸದರಿ ವಿದ್ಯಾರ್ಥಿನಿಲಯದಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಆದೇಶಿಸಿದೆ.

| ಕ್ರ. ಸಂ. | ಹುದ್ದೆ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಾರ್ಡನ್ | 01 |
| 2 | ಅಡುಗೆಯವರು | 02 |
| 3 | ಅಡುಗೆ ಸಹಾಯಕರು | 02 |
| | ಒಟ್ಟು | 05 |

ಸರ್ಕಾರದ ಆದೇಶ ಸಂಖ್ಯೆ:ಸಕಇ 133 ಪಕವಿ 2010 ದಿ: 29–06–2010 ರಲ್ಲಿ ನಮೂದಿಸಿರುವ ಇತರೆ ಅಂಶಗಳು ಇದಕ್ಕೂ ಅನ್ವಯವಾಗುತ್ತದೆ ಆದರೆ ಸದರಿ ಉದ್ದೇಶಕ್ಕಾಗಿ 2010–11ನೇ ಸಾಲಿಗೆ ಹೆಚ್ಚಿನ ಮೊತ್ತದ ಅನುದಾನ ಒದಗಿಸಲಾಗುವುದಿಲ್ಲ.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಎಫ್‌ಡಿ 594 ವೆಚ್ಚ – 3/10. ದಿನಾಂಕ: 12–10–2010 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಪಿ.ಆರ್. 2838

ಸರ್ಕಾರದ ಅಧೀನ ಕಾರ್ಯದರ್ಶಿ–1
ಸಮಾಜ ಕಲ್ಯಾಣ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ – ಬದಲಿ ವಿಚಾರಣಾಧಿಕಾರಿಯನ್ನು ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂ: ಸಿಆಸುಇ 113 ಕೆಇವಿ 2007 ದಿ: 08–12–2009.
2. ಸರ್ಕಾರಿ ಆದೇಶ ಸಂ: ಸಿಆಸುಇ 113 ಕೆಇವಿ 2007 ದಿ: 04–02–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ವಿಚಾರಣೆ ನಡೆಸಲು ಶ್ರೀ ಪ್ರಭಾಕರ್ ಗಣಪತಿ ಕುಲಕರ್ಣಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕಾರ್ಯದರ್ಶಿ, ಬೆಳಗಾಂ, ನಗರಾಭಿವೃದ್ಧಿ ಪ್ರಾಧಿಕಾರ ಬೆಳಗಾಂ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸಲಾಗಿದ್ದ ಕಾರ್ಯದರ್ಶಿ, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ ಬೆಳಗಾಂ ಬದಲಾಗಿ ನಗರ ಯೋಜಕ ಸದಸ್ಯ (ಉಪ ನಿರ್ದೇಶಕರು ನಗರ ಯೋಜನೆ) ಬೆಳಗಾಂ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಶ್ರೀ ಡಿ.ಬಿ. ನಾಯಕ್. ಕೆ.ಎ.ಎಸ್. ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ದಿ: 27–08–10 ರ ಪತ್ರದಲ್ಲಿ ವಿಚಾರಣಾಧಿಕಾರಿಗಳ ಬೆಳಗಾಂ ವಿಳಾಸಕ್ಕೆ ಪತ್ರ ಬರೆಯಲಾಗಿತ್ತು. ಆದರೆ ಸದರಿಯವರು ಈ ವಿಳಾಸದಲ್ಲಿ ಲಭ್ಯವಿರುವುದಿಲ್ಲವೆಂದು ಹಾಗೂ ಇವರು ಪುಣೆಯಲ್ಲಿ ಇರುವುದಾಗಿ ಅಂಚೆ ಇಲಾಖೆಯವರು ಲಕೋಟೆ ಮೇಲೆ ನಮೂದಿಸಿದ್ದರಿಂದ ಪುನಃ ದಿ: 14–09–10 ರಂದು ಅಗತ್ಯ ದಾಖಲೆಗಳನ್ನು ಕಳುಹಿಸುತ್ತಾ, ವಿಚಾರಣೆಯನ್ನು ಶೀಘ್ರವಾಗಿ ಮುಕ್ತಾಯಗೊಳಿಸುವಂತೆ ಕೋರಲಾಗಿತ್ತು. ಆದರೆ ಆ ಪತ್ರವು ಸಹ ಅವರಿಗೆ ತಲುಪದೇ ಹಿಂದಕ್ಕೆ ಬಂದಿರುತ್ತದೆ. ವಿಚಾರಣಾಧಿಕಾರಿಯಾಗಿ ನೇಮಿಸಿರುವ ಸರ್ಕಾರಿ ಆದೇಶವಾಗಲಿ ಅಥವಾ ಸಂಬಂಧಪಟ್ಟ ದಾಖಲೆಗಳಾಗಲಿ ಇವರಿಗೆ ತಲುಪದ ಕಾರಣ ಸುಮಾರು ಒಂದು ವರ್ಷದಿಂದ ವಿಚಾರಣೆಯಲ್ಲಿ ಯಾವುದೇ ಪ್ರಗತಿ ಕಂಡು ಬಂದಿರುವುದಿಲ್ಲ. ವಿಚಾರಣಾಧಿಕಾರಿಗಳ ವಿಳಾಸದ ಕುರಿತು ಮಂಡನಾಧಿಕಾರಿಗಳನ್ನು ದೂರವಾಣಿ ಮುಖಾಂತರ ಸಂಪರ್ಕಿಸಲಾಗಿ ವಿಚಾರಣಾಧಿಕಾರಿಗಳು ಇದುವರೆವಿಗೂ ವಿಚಾರಣೆ ಪ್ರಾರಂಭಿಸಿರುವುದಿಲ್ಲವೆಂದು ಹಾಗೂ ಅವರ ಸುಳಿವು ಕೂಡ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಕರಣದ ವಿಚಾರಣೆ ನಡೆಸಲು ಬದಲಿ ವಿಚಾರಣಾಧಿಕಾರಿಗಳನ್ನು ನೇಮಿಸಲು ಸರ್ಕಾರವು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 113 ಕೆಇವಿ 2007 ಬೆಂಗಳೂರು, ದಿ: 09 ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಪ್ರಭಾಕರ್ ಗಣಪತಿ ಕುಲಕರ್ಣಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಬದಲಾಗಿ ಪ್ರಾದೇಶಿಕ ಆಯುಕ್ತರು. ಬೆಳಗಾಂ ವಿಭಾಗ ಬೆಳಗಾಂ ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಶೀಘ್ರವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳ ಮುಂದೆ ಪ್ರಕರಣವನ್ನು ಮಂಡಿಸುವ ಸಲುವಾಗಿ ನೇಮಿಸಲಾಗಿದ್ದ ನಗರ ಯೋಜಕ ಸದಸ್ಯ (ಉಪ ನಿರ್ದೇಶಕರು/ನಗರ ಯೋಜನೆ) ಬೆಳಗಾಂ ಇವರೇ ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

ಪಿ.ಆರ್. 2839

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ನಾರಾಯಣಸ್ವಾಮಿ ಕೆ.ಎ.ಎಸ್. (ನಿ) ಅಧಿಕಾರಿ ಹಾಗೂ ಶ್ರೀ ಎಸ್.ವೈ. ಬಸವರಾಜಪ್ಪ ಯೋಜನಾ ನಿರ್ದೇಶಕರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ –
ಶ್ರೀ ನಾರಾಯಣಸ್ವಾಮಿ, ಕೆ.ಎ.ಎಸ್. ನಿವೃತ್ತ ಅಧಿಕಾರಿ ಇವರಿಗೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂ: ಸಿಆಸುಇ 24 ಎಸ್ಇಎನ್ 07 ದಿ: 11–06–07 ಮತ್ತು ದಿ: 04–08–07.
2. ವಿಚಾರಣಾಧಿಕಾರಿಗಳ ವರದಿ ದಿ: 24–07–2009
3. ಎರಡನೇ ಕಾರಣ ಕೇಳುವ ನೋಟೀಸ್ ದಿ: 05–12–2009
4. ಎರಡನೇ ಕಾರಣ ಕೇಳುವ ನೋಟೀಸಿಗೆ ಉತ್ತರ ದಿ: 23–12–2009.
5. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ದಿ: 23–10–2010.

**ಪ್ರಸ್ತಾವನೆ :**

ಶ್ರೀ ನಾರಾಯಣಸ್ವಾಮಿ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರು ಚಿತ್ರದುರ್ಗ ಜಿಲ್ಲಾ ಪಂಚಾಯತ್‌ನಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಹಾಗೂ ಶ್ರೀ ಎಸ್.ವೈ. ಬಸವರಾಜಪ್ಪ ಇವರು ಯೋಜನಾ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, 2004–05 ಮತ್ತು 2006–07 ರ ಅವಧಿಯಲ್ಲಿ ನಿಯಮಗಳನ್ನು ಪಾಲಿಸದೇ ಎಸ್.ಜಿ.ಎಸ್.ವೈ ಯೋಜನೆಯ ಪ್ರಚಾರ ಸಾಮಗ್ರಿಗಳ ಪೂರೈಕೆಗೆ ಆದೇಶ ನೀಡಿದ ಆರೋಪ ಅರ್ಪಿತ ರೂರಲ್ ಮತ್ತು ಅರ್ಬನ್ ಡೆವಲಪ್‌ಮೆಂಟ್ ಸೊಸೈಟಿ ಚಳ್ಳಕೆರೆ ಇವರಿಂದ ಎಸ್.ಜಿ.ಎಸ್.ವೈ ಯೋಜನೆಗಳ ಮಾರ್ಗಸೂಚಿ ಬಗ್ಗೆ ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಪ್ರಚಾರ ಮಾಡಲು ಪ್ರಚಾರ ಸಾಮಗ್ರಿಗಳನ್ನು ಖರೀದಿಸಿದ ಆರೋಪ ಮತ್ತು ರೂ. 1.00 ಲಕ್ಷಗಳಿಗೂ ಮೇಲ್ಪಟ್ಟ ಖರೀದಿಗೆ ಟೆಂಡರ್ ಕರೆಯುವುದು ಕಡ್ಡಾಯವಾಗಿದ್ದರೂ ಟೆಂಡರ್ ಕರೆಯದೇ ಪ್ರಚಾರ ಸಾಮಗ್ರಿಗಳನ್ನು ಅವಶ್ಯಕತೆ ಇಲ್ಲದೇ ಇದ್ದರೂ ಟಿನ್‌ಪ್ಲೇಟ್‌ಗಳನ್ನು ಖರೀದಿಸಿದ ಆರೋಪ ಮತ್ತು 185 ಗ್ರಾಮ ಪಂಚಾಯಿತಿಗಳಿಗೆ ಅಗತ್ಯ ಪ್ರಚಾರ ಸಾಮಗ್ರಿಗಳನ್ನು ಖರೀದಿಸದೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಪೋಸ್ಟರ್ ಟಿನ್ ಪ್ಲೇಟುಗಳ ಖರೀದಿಸಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂ. (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಪ್ರಾದೇಶಿಕ ಆಯುಕ್ತರು ಬೆಂಗಳೂರು ವಿಭಾಗ ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ.(2) ರಲ್ಲಿ ಓದಲಾದ ದಿ: 24–07–2009 ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ನಾರಾಯಣಸ್ವಾಮಿ, ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಹಾಗೂ ಶ್ರೀ ಎಸ್.ವೈ. ಬಸವರಾಜಪ್ಪ, ಯೋಜನಾ ನಿರ್ದೇಶಕರು ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿದೆಯೆಂದು ವರದಿಯನ್ನು ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಆರೋಪಿತ ಅಧಿಕಾರಿಗಳಿಗೆ ಎರಡನೇ ಕಾರಣ ಕೇಳುವ ನೋಟೀಸ್ ಮೂಲಕ ಒದಗಿಸಲಾಗಿತ್ತು. ಇದಕ್ಕೆ ಉತ್ತರವಾಗಿ ಶ್ರೀ ನಾರಾಯಣಸ್ವಾಮಿ, ಕೆ.ಎ.ಎಸ್. (ನಿವೃತ್ತ) ಅಧಿಕಾರಿ ರವರು ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವಾಗಿರುವುದಿಲ್ಲವೆಂದು ಹಾಗೂ ತಾವು ಸದುದ್ದೇಶದಿಂದ ಕಾರ್ಯನಿರ್ವಹಿಸಿರುವುದರಿಂದ ತಮ್ಮನ್ನು ಆರೋಪದಿಂದ ಮುಕ್ತಗೊಳಿಸಲು ಕೋರಿದ್ದಾರೆ.

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ವಿಚಾರಣಾ ವರದಿಯಲ್ಲಿ ತಿಳಿಸಿರುವಂತೆ ಈ ಆರೋಪಿತರು ಸರ್ಕಾರದ ಅನುಮೋದನೆಯಿಲ್ಲದೇ ಪ್ರಚಾರ ಸಾಮಗ್ರಿಗಳನ್ನು ಖರೀದಿಸಿರುವುದು ಹಾಗೂ ಬೇಡಿಕೆ ಪತ್ರಗಳನ್ನು ಪಡೆಯದೇ ಹಾಗೂ ಅವಶ್ಯಕತೆಗೆ ಅನುಸಾರವಾಗಿ ಸಾಮಗ್ರಿಗಳನ್ನು ಖರೀದಿಸದೆ ಸ್ವಪ್ರೇರಣೆಯಿಂದ ಪ್ರಚಾರ ಸಾಮಗ್ರಿಗಳನ್ನು ಖರೀದಿಸಿರುವ ಆರೋಪಗಳು ಸಾಬೀತಾಗಿರುತ್ತದೆ. ಮೇಲ್ಕಂಡ ಕಾರಣಗಳಿಂದಾಗಿ ಆರೋಪಿತ ಅಧಿಕಾರಿ ಎರಡನೇ ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿರುವ ಲಿಖಿತ ಅಹವಾಲಿನಲ್ಲಿ ಅವರನ್ನು ಆರೋಪಮುಕ್ತಗೊಳಿಸಲು ಪರಿಗಣಿಸುವಂತಹ ಯಾವುದೇ ಅಂಶಗಳು ಕಂಡುಬಂದಿಲ್ಲದಿರುವುದರಿಂದ ಆಪಾದಿತರು ವಿಚಾರಣಾ ವರದಿಯನ್ನು ಔಪಚಾರಿಕವಾಗಿ ವಿರೋಧಿಸುತ್ತಿರುವುದನ್ನು ಮನಗಂಡು ವಿಚಾರಣಾ ವರದಿಯನ್ನು ಒಪ್ಪಿಕೊಳ್ಳಲು ಸರ್ಕಾರವು ತೀರ್ಮಾನಿಸಿದೆ.

ಮೇಲ್ಕಂಡಂತೆ ಆರೋಪಿತರಾದ ಶ್ರೀ ನಾರಾಯಣಸ್ವಾಮಿ, ನಿವೃತ್ತ ಕೆ.ಎ.ಎಸ್ ಅಧಿಕಾರಿ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ, ಇವರ ನಿವೃತ್ತಿ ವೇತನದಲ್ಲಿ ಶೇಕಡ 5 ರಷ್ಟು ಮೊತ್ತವನ್ನು 2 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಧರಿಸಿದ್ದು, ದಂಡನೆ ವಿಧಿಸುವ ಈ ಪ್ರಸ್ತಾವನೆಗೆ ಮೇಲೆ ಓದಲಾದ ಕ್ರಮ ಸಂ. (5) ರ ಪತ್ರದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಪಡೆದು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಎಸ್ಇಎನ್ 2007 (ಸಿಆಸುಇ 147 ಕೆಇವಿ 2007) ಬೆಂಗಳೂರು ದಿನಾಂಕ: 10ನೇ ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ. ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ನಾರಾಯಣಸ್ವಾಮಿ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರಿಗೆ ಅವರ ನಿವೃತ್ತಿ ವೇತನದಲ್ಲಿ ಮಾಹೆಯಾನ ಶೇಕಡ 5 ರಷ್ಟರ ಮೊತ್ತವನ್ನು 2 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

ಪಿ.ಆರ್. 2840

## ENERGY SECRETARIAT

**Sub:** Enhancement of wind power capacity from 1.80 MW to 16.80 MW in favour of M/s Sarjan Realities Limited-reg.

**Read:**
1. Government Order No: DE 60 NCE 2005 dated: 22.3.2005
2. Letters No: KRED/08/SRL (1.80 to 16.8)/2009/3533 dated: 29/30.10.2009 and KRED/08/SRL(1.80 to 16.8)/2010/2987 dated: 13/21.10.2010 received from the Managing Director, Karnataka Renewable Energy Development Limited, Bangalore.

**Preamble:**

In the Government order read at (1) above, sanction has been accorded for implementation of 1.8 MW capacity wind power project (part capacity of 34.8 MW) in favour of M/s Sarja Realities Limited at Rangayyana Durga State Forest. Basavanakote village in Davanagere District.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, vide his letters read at (2) above has recommended to enhance the allotted wind power capacity from 1.80 MW (part capacity of 34.8 MW) to 16.80 MW in favour of M/s. Sarjan Realities Limited at Rangayyana Durga State Forest, Basavanakote village in Davanagere District.

The proposal has been examined in detail and issued the following Order.

**Government Order No. EN 560 NCE 2009, Bangalore, Dated 12th November, 2010**

Government accords approval for enhancement of wind power capacity from 1.80 MW (part capacity of 34.8 MW) to 16.80 MW in favour of M/s. Sarjan Realities Limited at Rangayyana Durga State Forest, Basavanakote village in Davanagere District as detailed below:

| Geographical Area Details | Sanctioned capacity | Areas proposed for enhancement | Total installable potential including enhancement |
|---|---|---|---|
| Three non-contiguous NW-SE Oriented ridges are located on the N-E of Basavanakote village and the location are described as open scrub and are in Rangayyana Durga State Forest, with 703, 668 and 691 m peaks. The entire area is bounded by the following geographical co-ordinates:<br>Latitude: 14º40’-42’26” N<br>Longitude: 76º8’4”-10<br>Peaks 703, 668 and 691 M elevations. | 1.8 MW<br><br>EN 60 NCE 2005 dated 22.3.2005 | 15 MW | 16.8 MW<br><br>2.1 MW X8 Nos (2100 kwx8) |
| Total | 1.8 MW | 15 MW | 16.8 MW |

The Government has reserved the power to Cancel/modify this Order.

The other terms and conditions of the allotment Government Order shall **IPSO FACTO** applicable.

By Order and in the name of the Governor of Karnataka

**SURESH B. KRISHNAPPANAVAR**

Under Secretary to Government

Energy Department

P.R. 2841

## COMMERCE AND INDUSTRIES SECRETARIAT

**Sub:** Visit of Karnataka delegation to Koula Lumpur, Malaysia.

**Read:** Government Order No: CI 474 SPI 2010, Bangalore dated: 15.11.2010.

**Preamble:**

A high level delegation lead by Hon’ble Minister for Medium and Large Industries of Government of Karnataka is visiting Koula Lumpur, Malaysia to attend GBLF Conference organized by Commonwealth, Business Council from 21st to 24th November 2010.

The Ministry of External Affairs, Government of India has accorded Political Clearance for the above visit.

Further the Government of Karnataka has sanctioned for the above visit vide Government Order cited at above.

Hence the following order.

**Government Order No. CI 474 SPI 2010. Bangalore Dated 18.11.2010**

Under the above circumstances, sanction is hereby accorded to Indian Embassy in Malaysia to incur expenditure towards making necessary arrangements for accommodation, transport and one to one meeting with investors during the visit of the delegation. The expenditure will be reimbursed by Government of Karnataka.

By Order and in the name of the Governor of Karnataka

**A.V. Srinivasa Dikshit**

Desk Officer (Technical Cell) Commerce & Industries Department

P.R. 2842

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ :** 1) ಸಮಸಂಖ್ಯೆಯ ಸರ್ಕಾರಿ ಆದೇಶ ದಿನಾಂಕ: 16-10-2008.

2) ಕರ್ನಾಟಕ ಸರ್ಕಾರ ಸಚಿವಾಲಯದ ನೌಕರರ ಸಂಘದ ಅಧ್ಯಕ್ಷರು, ಇವರ ಪತ್ರ ಸಂಖ್ಯೆ:ಕಸಸ:ನೌಸಂ:2010 ದಿನಾಂಕ: 20/07/2010

**ಪ್ರಸ್ತಾವನೆ :**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 16/10/2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳಿಗೆ ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಈ ಕೆಳಕಂಡ ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ಆದೇಶವನ್ನು ಹೊರಡಿಸಲಾಗಿತ್ತು.

(i) ಸರ್ಕಾರದ ಸಚಿವಾಲಯದಲ್ಲಿನ ಹಾಜರಾತಿ ವ್ಯವಸ್ಥೆಯನ್ನು (Attendance Monitoring System) ಹೆಚ್ಚಿನ ಕೌಶಲ್ಯದಿಂದ ಕೂಡಿದ ತಾಂತ್ರಿಕತೆಯಿಂದ ಸಿದ್ಧಪಡಿಸುವುದು ಹಾಗೂ ಹಾಜರಾತಿ ವ್ಯವಸ್ಥೆಯ ಸಂಪೂರ್ಣ ಜವಾಬ್ದಾರಿಯನ್ನು ಇಲಾಖೆಗಳ ಹಾಜರಾತಿಯ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗೆ (Attendance Monitoring System Officer) ವಹಿಸಲಾಗಿದೆ.

(ii) ಸಚಿವಾಲಯದ ಎಲ್ಲಾ "ಸಿ" ಮತ್ತು "ಡಿ" – ಗುಂಪಿನ ನೌಕರರುಗಳ ಸಾಂದರ್ಭಿಕ ರಜೆಯನ್ನು – ಉಳಿದ ಎಲ್ಲಾ ರಜೆಗಳ ಮಂಜೂರಾತಿಯ ಅಧಿಕಾರವನ್ನು ಸಂಬಂಧಿಸಿದ ಇಲಾಖೆಯ ಹಾಜರಾತಿ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗೆ ಹಾಗೂ "ಎ" ಮತ್ತು "ಬಿ" ಗುಂಪಿನ ಅಧಿಕಾರಿಗಳ ರಜೆಗಳ ಮಂಜೂರಾತಿಯ ಪ್ರತ್ಯಾಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ನೀಡಲಾಗಿದೆ ಹಾಗೂ ಸಾಂದರ್ಭಿಕ ರಜೆ ಮಂಜೂರಾತಿ ಕುರಿತಂತೆ ಈಗಿರುವ ಮಂಜೂರಾತಿಯ ಪ್ರತ್ಯಾಧಿಕಾರವನ್ನು ಮುಂದುವರಿಸಲಾಗಿದೆ.

ಹಾಜರಾತಿ ವ್ಯವಸ್ಥೆಯನ್ನು ಸಂಪೂರ್ಣವಾಗಿ ಯಾಂತ್ರೀಕರಣಗೊಳಿಸುವವರೆಗೆ ಸೇವಾ ಪುಸ್ತಕಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿರುವ ಕಾರಣ, ರಜೆಯ ಮಂಜೂರಾತಿಯ ಮುನ್ನ ಸಂಬಂಧಿತ ಹಾಜರಾತಿ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗಳು ಸಂಬಂಧಿಸಿದ ಅಧಿಕಾರಿಗಳ/ನೌಕರರ ಲೆಕ್ಕದಲ್ಲಿರುವ ರಜೆಯ ವಿವರಗಳನ್ನು ಪಡೆಯುವುದು ಹಾಗೂ ರಜೆಯ ಮಂಜೂರಾತಿಯ ಆದೇಶಗಳನ್ನು ಸೇವಾ ಪುಸ್ತಕಗಳಲ್ಲಿ ನಮೂದಿಸಲು ಅನುವಾಗುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸುವುದು.

(iii) ಗಳಿಕೆ ರಜೆಯನ್ನು ಅಧ್ಯರ್ಪಣೆ ಮಾಡಿ ನಗದೀಕರಣಗೊಳಿಸಿಕೊಳ್ಳುವ ಸೌಲಭ್ಯವನ್ನು ನೇರವಾಗಿ ಸಂಬಂಧಿಸಿದ ಇಲಾಖಾ ಹಾಜರಾತಿ ವ್ಯವಸ್ಥೆಯ ಮೇಲುಸ್ತುವಾರಿ ಅಧಿಕಾರಿಗಳು ಮಂಜೂರಾತಿಯ ನಂತರ ನೇರವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ) ಗೆ ಕಳುಹಿಸುವುದು.

**ಶಿಸ್ತು ಪ್ರಾಧಿಕಾರದ ಅಧಿಕಾರಗಳು**

ಶಿಸ್ತು ಪ್ರಾಧಿಕಾರದ ಅಧಿಕಾರಗಳ ಪ್ರತ್ಯಾಯೋಜನೆ ಕುರಿತಂತೆ ಈ ಕೆಳಕಂಡ ಅಂಶಗಳ ಮೇಲೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು)ಯು ಸಂಬಂಧಿಸಿದ ನಿಯಮಾವಳಿಗಳಿಗೆ ತಿದ್ದುಪಡಿಗಳನ್ನು ಜಾರಿಗೊಳಿಸುವುದು ಹಾಗೂ ಆದೇಶಗಳನ್ನು ಹೊರಡಿಸುವುದು.

(i) ಸಚಿವಾಲಯದ "ಡಿ" – ಗುಂಪಿನ ನೌಕರರುಗಳಿಗೆ ಕಠಿಣ ದಂಡನೆಗಳನ್ನು ವಿಧಿಸುವ ಅಧಿಕಾರವನ್ನು ಸಂಬಂಧಿಸಿದ ಉಪ ಕಾರ್ಯದರ್ಶಿಗಳಿಗೆ ನೀಡುವುದು, ಈ ದಂಡನೆಗಳ ವಿರುದ್ಧ ಸಂಬಂಧಿಸಿದ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಮೇಲ್ಮನವಿ ಪ್ರಾಧಿಕಾರವಾಗಿರುತ್ತಾರೆ.

(ii) ಸಚಿವಾಲಯದ "ಸಿ" ಗುಂಪಿನ ನೌಕರರುಗಳಿಗೆ ಕಠಿಣ ದಂಡನೆಗಳನ್ನು ವಿಧಿಸುವ ಸಂಪೂರ್ಣ ಅಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ನೀಡುವುದು

(iii) ಸಚಿವಾಲಯದ "ಬಿ" – ಗುಂಪಿನ ಅಧಿಕಾರಿಗಳಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ (8) ರಲ್ಲಿನ (೨) ರಿಂದ (೩) ರವರೆಗಿನ ದಂಡನೆಗಳನ್ನು ವಿಧಿಸುವ ಅಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ನೀಡುವುದು.

(iv) ಸರ್ಕಾರದ ಎಲ್ಲಾ ಇಲಾಖಾ ಮುಖ್ಯಸ್ಥರುಗಳನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ (7) ರ ಮೇರೆಗೆ ಅವರ ಅಧೀನದಲ್ಲಿ ಬರುವ ಎಲ್ಲಾ "ಬಿ" – ಗುಂಪಿನ ಅಧಿಕಾರಿಗಳಿಗೆ ನೇಮಕಾತಿ ಪ್ರಾಧಿಕಾರವಾಗಿ ವಿಹಿತಗೊಳಿಸುವುದು.

ಮೇಲ್ಕಂಡ ಆಡಳಿತಾತ್ಮಕ ಅಧಿಕಾರಗಳ ಪ್ರತ್ಯಾಯೋಜನೆಯಿಂದಾಗಿ ಆಗುವ ಪರಿಣಾಮಗಳ ಕುರಿತಂತೆ ಸರ್ಕಾರದ ವಿವಿಧ ಇಲಾಖೆಗಳು ಕೆಳಕಂಡಂತೆ ಕ್ರಮ ಕೈಗೊಳ್ಳಲು ಸೂಚಿಸಲಾಗಿದೆ.

(1) ಇ-ಆಡಳಿತ – ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹಾಜರಾತಿ ವ್ಯವಸ್ಥೆಯನ್ನು ಹೆಚ್ಚಿನ ಕೌಶಲ್ಯದಿಂದ ಕೂಡಿದ ತಾಂತ್ರಿಕತೆಯನ್ನು ಹೊಂದಿರುವ ಹಾಗೂ ಫ್ಲೆಕ್ಸಿ ಮತ್ತು ನಾನ್ ಫ್ಲೆಕ್ಸಿ ಅವಧಿಗಳ ಅಧಿಕಾರಿಗಳ ಹಾಗೂ ನೌಕರರ ಸಂಪೂರ್ಣ ಸೇವಾ ವಿವರಗಳನ್ನು ಒಳಗೊಂಡಂತೆ ಕೂಡಲೇ ಸಿದ್ಧಪಡಿಸಲು ಕ್ರಮ ಕೈಗೊಳ್ಳುವುದು;

(2) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆಡಳಿತ ಮತ್ತು ಸೇವೆಗಳ ವಿಭಾಗಗಳು ಸಚಿವಾಲಯದ ಎಲ್ಲಾ ಅಧಿಕಾರಿಗಳ/ನೌಕರರುಗಳ ಎಲ್ಲಾ ರಜೆಗಳ ವಿವರಗಳನ್ನು ಹಾಜರಾತಿ ವ್ಯವಸ್ಥೆಯಲ್ಲಿ ಕೂಡಲೇ ಅಳವಡಿಸಲು ಕ್ರಮ ಕೈಗೊಳ್ಳುವುದು;

(3) ಶಿಸ್ತು ಪ್ರಾಧಿಕಾರದ ಪ್ರತ್ಯಾಯೋಜನೆಗಳ ಕುರಿತಂತೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮಗಳಿಗೆ ಅವಶ್ಯಕ ತಿದ್ದುಪಡಿಗಳನ್ನು ಹೊರಡಿಸುವಲ್ಲಿ ಸೂಕ್ತ ಕ್ರಮಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ತೆಗೆದುಕೊಳ್ಳುವುದು.

(4) ಈ ಆಡಳಿತಾತ್ಮಕ ಅಧಿಕಾರಗಳ ಪ್ರತ್ಯಾಯೋಜನೆಯಿಂದಾಗಿ ಉಂಟಾಗಬಹುದಾದ ಹಾಗೂ ಸಿಬ್ಬಂದಿಗಳ ಕುರಿತಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯು ಸಚಿವಾಲಯದ ಎಲ್ಲಾ ಇಲಾಖೆಗಳ ಕಾರ್ಯಾಧ್ಯಯನವನ್ನು ಕೈಗೊಂಡು ಸೂಕ್ತ ಪುನರ್ ರಚನೆಗೆ ಅವಕಾಶ ಮಾಡಿಕೊಡುವುದು.

ಕರ್ನಾಟಕ ಸರ್ಕಾರದ ಸಚಿವಾಲಯದ ನೌಕರರ ಸಂಘದ ಅಧ್ಯಕ್ಷರು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರ ದಿನಾಂಕ: 20/07/2010ರಲ್ಲಿ ಈ ಕೆಳಗಿನಂತೆ ತಿಳಿಸಿದ್ದಾರೆ.

ಸರ್ಕಾರದ ವಿವಿಧ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಸಚಿವಾಲಯದ ಎಲ್ಲಾ "ಸಿ" ಮತ್ತು "ಡಿ" ಗುಂಪಿನ ನೌಕರರುಗಳ ರಜೆ ಮಂಜೂರಾತಿ, ಆಡಳಿತಾತ್ಮಕ ಹಾಗೂ ಶಿಸ್ತು ಪ್ರಾಧಿಕಾರದ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ಆದೇಶ ಹೊರಡಿಸಲಾಗಿದೆ.

ಸಚಿವಾಲಯದಲ್ಲಿ 3,500ಕ್ಕೂ ಹೆಚ್ಚು ಸಿಬ್ಬಂದಿ ಒಂದೇ ಕಡೆಗೆ ಕೆಲಸ ನಿರ್ವಹಿಸುತ್ತಲಿದ್ದು, ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಸಚಿವಾಲಯದ ಸಿಬ್ಬಂದಿ ಹಾಗೂ ಅಧಿಕಾರಿಗಳ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರಿಗಳಾಗಿದ್ದಾರೆ.

ಸಚಿವಾಲಯವು ಒಂದೇ-ಒಂದು ಘಟಕವಾಗಿದ್ದು (ಖಜಥಿಡಿಜಣಚಿಡಿಬಿಣ ಚಿ ಕಟಜ ಣಟಿಣ) ಸಚಿವಾಲಯದಲ್ಲಿ ಹಲವಾರು ವರ್ಷಗಳಿಂದ ವ್ಯವಸ್ಥಿತವಾಗಿ ಜಾರಿಯಲ್ಲಿರುವ ಹಾಗೂ ಪರೀಕ್ಷಿತ, ಯಶಸ್ವಿಯಾಗಿ ನಡೆದುಕೊಂಡು ಬಂದಿರುವ ಕೇಂದ್ರೀಕೃತ ವ್ಯವಸ್ಥೆಯಲ್ಲಿ ಆಡಳಿತಾತ್ಮಕ ಮತ್ತು ಲೆಕ್ಕಪತ್ರ ಶಾಖೆಗಳು ಕಾರ್ಯನಿರ್ವಹಿಸುತ್ತಿವೆ.

ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 16/10/2008ರ ಆದೇಶದ ಅನುಗುಣವಾಗಿ ಅಧಿಕಾರವನ್ನು ಇಲಾಖಾ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವುದರಿಂದ ಸಚಿವಾಲಯದ ಆಡಳಿತ ಶಾಖೆ ಹಾಗೂ ಸೇವಾ ಶಾಖೆಗಳು ಈ ಕೆಳಕಂಡ ಎಲ್ಲಾ ಕಾರ್ಯಗಳನ್ನು ವಿಕೇಂದ್ರಿಕೃತ ಎಲ್ಲಾ ಇಲಾಖೆಗಳಲ್ಲಿ ನಿರ್ವಹಿಸಲು ಸಾಧ್ಯವಿಲ್ಲ.

1) ವಿವಿಧ ಹುದ್ದೆಗಳ ಹಾಗೂ ಸಹಾಯಕ ತತ್ಸಮಾನ ಹುದ್ದೆಗಳ ನೇಮಕಾತಿ.
2) ವಿವಿಧ ಹುದ್ದೆಗಳ ತತ್ಸಮಾನ ಹುದ್ದೆಗಳ ಬಡ್ತಿ.
3) ವರ್ಗಾವಣೆ ಮತ್ತು ನಿಯೋಜನೆ.
4) ವಾರ್ಷಿಕ ವೇತನ ಬಡ್ತಿ, ವೈಯಕ್ತಿಕ ವೇತನ, ಗಳಿಕೆ ರಜೆ ನಗದೀಕರಣ, ಮುಂಗಡಗಳು, ಕಾಲಮಿತಿ ವೇತನ ಬಡ್ತಿ, ಸ್ಥಗಿತ ವೇತನ ಬಡ್ತಿ, ವೈದ್ಯಕೀಯ ವೆಚ್ಚ ಮರುಪಾವತಿ, ಸ್ವಗ್ರಾಮ ಪ್ರಯಾಣ ರಿಯಾಯ್ತಿ ಭತ್ಯೆ ಮತ್ತು ರಜಾ ಪ್ರಯಾಣ ಮಂಜೂರಾತಿ ವಿಷಯಗಳು, ಸಾಲ ಮುಕ್ತ ಪತ್ರ ನೀಡುವಿಕೆ, ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸುವಿಕೆ, ವಾಹನ ಖರೀದಿ, ಮನೆ ಕಟ್ಟುವ, ಮನೆ ಖರೀದಿ ಮತ್ತು ಹಬ್ಬದ ಮುಂಗಡ ಭತ್ಯೆ ಇತ್ಯಾದಿ.
5) ಸಾಮಾನ್ಯ ಭವಿಷ್ಯ ನಿಧಿ, ನಿವೃತ್ತಿ ವೇತನ, ಡಿ.ಸಿ.ಆರ್.ಜಿ ಮತ್ತು ಸೇವಾಂತ್ಯದ ಇನ್ನಿತರ ಸವಲತ್ತುಗಳ ಇತ್ಯರ್ಥ.
6) ಸೇವಾ ಪುಸ್ತಕಗಳ ನಿರ್ವಹಣೆ.
7) ವಿವಿಧ ವೃಂದಕ್ಕೆ ಸಂಬಂಧಿಸಿದ ನ್ಯಾಯಾಂಗ ಮೊಕದ್ದಮೆಗಳು.
8) ಮಾಹಿತಿ ಹಕ್ಕು ವಿಷಯಗಳು.
9) ವಿಧಾನ ಸಭೆ/ಪರಿಷತ್ತಿನ ವಿಷಯಗಳು.
10) ಮಾನ್ಯ ಮುಖ್ಯ ಮಂತ್ರಿಗಳ ಕಾರ್ಯಾಲಯದ ಸಿಬ್ಬಂದಿ ಹಾಗೂ ವಿವಿಧ ಸಚಿವರುಗಳ ಆಪ್ತ ಶಾಖೆಯ ಸಿಬ್ಬಂದಿಗಳ ನೇಮಕಾತಿ, ನಿಯೋಜನೆ, ವರ್ಗಾವಣೆ ಇತ್ಯಾದಿ.

ಮೇಲಿನ ವಿಷಯಗಳ ಕುರಿತು ದಿನಾಂಕ: 16/10/2008ರ ಆದೇಶದಲ್ಲಿ ಪ್ರತ್ಯಾಯೋಜಿಸಿರುವ ಆಡಳಿತಾತ್ಮಕ ಅಧಿಕಾರದಿಂದಾಗಿ ಅನುಕೂಲಗಳಿಗಿಂತ ಅನಾನುಕೂಲಗಳೇ ಹೆಚ್ಚಾಗಿರುತ್ತವೆ. ಎಲ್ಲಾ ಕೆಲಸಕಾರ್ಯಗಳನ್ನು ತಂತ್ರಾಂಶದಲ್ಲಿ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಪ್ರತ್ಯಾಯೋಜಿಸಿದ ಕೆಲಸಕಾರ್ಯಗಳಿಗೆ ಹೆಚ್ಚಿನ ಸಿಬ್ಬಂದಿ ಸೃಜನೆ ಹಾಗೂ ಇನ್ನುಳಿದ ಕೆಲಸಕಾರ್ಯಗಳಿಗೆ ಈಗಿರುವ ಆಡಳಿತ ಶಾಖೆಗಳ ಹಾಗೂ ಸೇವಾ ಶಾಖೆಗಳ ಮುಂದುವರಿಕೆಯೂ ಅಸಮಂಜಸವಾಗಿದೆ. ಕೆಲವು ಕೆಲಸಗಳಿಗೆ ಕೇಂದ್ರೀಕೃತ ವ್ಯವಸ್ಥೆ ಹಾಗೂ ಕೆಲವು ಕೆಲಸಗಳಿಗೆ ವಿಕೇಂದ್ರೀಕೃತ ವ್ಯವಸ್ಥೆ ಇಟ್ಟುಕೊಳ್ಳುವುದು ನೈಜವಲ್ಲದ (Unrealistic) ಮತ್ತು ಕಾರ್ಯಗತವಾಗದ (Impractical) ವ್ಯವಸ್ಥೆಯಾಗಿ ಪರಿಣಮಿಸಿದೆ. ಇದೊಂದು ಅನಾವಶ್ಯಕ ಕಸರತ್ತಾಗಿದೆ. ಈ ಎರಡೂ ವ್ಯವಸ್ಥೆಗಳು ಪೂರಕ ಹಾಗೂ ಅವಲಂಬಿತ ವ್ಯವಸ್ಥೆಯಾಗಿದೆ. ಈ ಎಲ್ಲಾ ಕೆಲಸ ಕಾರ್ಯಗಳನ್ನು ಒಂದೇ ಕಡೆಗೆ ಕೇಂದ್ರೀಕೃತವಾಗಿ ನಿರ್ವಹಿಸುವುದರಿಂದ ಮಾತ್ರ ವ್ಯವಸ್ಥೆಯನ್ನು ಸುಗಮವಾಗಿ, ಸುರಕ್ಷಿತವಾಗಿ, ದಕ್ಷವಾಗಿ ಮತ್ತು ವ್ಯವಸ್ಥಿತವಾಗಿ ನಡೆಸಬಹುದಾಗಿದೆ ಎಂದು ತಿಳಿಸಿ, ಸಚಿವಾಲಯವನ್ನು ಏಕ ಆಡಳಿತ ಘಟಕವೆಂದು Secretariat as one Unit) ಪರಿಗಣಿಸಿ, ಈ ಹಿಂದೆ ಇದ್ದಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ ಆಡಳಿತ ಅಧಿಕಾರವನ್ನು ಹಿಂದಿರುಗಿಸುವಂತೆ ಕೂಡ ಒತ್ತಾಯಿಸಿದ್ದಾರೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಆಡಳಿತ ಶಾಖೆಗಳ ಅಧಿಕಾರಿಗಳೂ ಸಹ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಇಸಪ 2008, ಬೆಂಗಳೂರು, ದಿನಾಂಕ 22ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಈಗಾಗಲೇ ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 38 ಇಸಪ 2008, ದಿನಾಂಕ: 16/10/2008ನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಸಚಿವಾಲಯವನ್ನು ಏಕ ಆಡಳಿತ ಘಟಕವೆಂದು ಪರಿಗಣಿಸಿ, ಈ ಹಿಂದೆ ಇದ್ದಂತೆ ಕೇಂದ್ರೀಕೃತ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಆಡಳಿತ ಅಧಿಕಾರವನ್ನು ಹಿಂದಿರುಗಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ॥ ಅಮಿತಾ ಪ್ರಸಾದ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಸಿಆಸುಇ (ಆಡಳಿತ ಸುಧಾರಣೆ)

ಪಿ.ಆರ್. 50